ॐ

ಶ್ರೀಮದ್ರಾಘವೇಂದ್ರತೀರ್ಥಗುರ್ವಂತರ್ಗತ ಭಾರತಿಪತಿ ಶ್ರೀ ಮುಖ್ಯಪ್ರಾಣಾಂತರ್ಗತ
ಸೀತಾಪತೇ ಶ್ರೀ ಮೂಲರಾಮಚಂದ್ರಾಯ ನಮಃ

ಶ್ರೀಮದ್ವಾದಿರಾಜಕೃತ

# ಶ್ರೀಕೃಷ್ಣಾಷ್ಟಕಮ್

ಮತ್ತು

ಶ್ರೀಮದ್ರಾಘವೇಂದ್ರತೀರ್ಥಕೃತ

# ದಶಾವತಾರಸ್ತವನಂ

(ಪ್ರತಿಪದಾರ್ಥ ಮತ್ತು ತಾತ್ಪರ್ಯಸಹಿತ)

ಅನುವಾದಕರು : ಕೆ. ಸತ್ಯನಾರಾಯಣಾಚಾರ್ಯರು
ಮಾಧ್ವವೇದಾಂತ ಪಾಠಶಾಲಾ, ರಾಜಾಜಿನಗರ

ಪ್ರಕಾಶಕರು

ಪವನ-ಪರಿಮಳ ಪ್ರಸಾರಿಣಿ ಸಭಾ
ರಾಘವೇಂದ್ರ ಸ್ವಾಮಿಗಳ ಬೃಂದಾವನ ಸನ್ನಿಧಿ
ಪ್ರಕಾಶನಗರ, ರಾಜಾಜಿನಗರ ಬಡಾವಣೆ
ಬೆಂಗಳೂರು–560021

ಶ್ರೀಮದ್ರಾಘವೇಂದ್ರತೀರ್ಥಗುರ್ವಂತರ್ಗತ ಭಾರತಿಪತಿ ಶ್ರೀ ಮುಖ್ಯಪ್ರಾಣಾಂತ

ಸೀತಾಪತೇ ಶ್ರೀ ಮೂಲರಾಮಚಂದ್ರಾಯ ನಮಃ

ಶ್ರೀಮದ್ವಾದಿರಾಜಕೃತ

# ಶ್ರೀಕೃಷ್ಣಾಷ್ಟಕಮ್

ಮತ್ತು

ಶ್ರೀಮದ್ರಾಘವೇಂದ್ರತೀರ್ಥಕೃತ

# ದಶಾವತಾರಸ್ತವನಂ

(ಪ್ರತಿಪದಾರ್ಥ ಮತ್ತು ತಾತ್ಪರ್ಯಸಹಿತ)

ಅನುವಾದಕರು : ಕೆ. ಸತ್ಯನಾರಾಯಣಾಚಾರ್ಯರು
ಮಾಧ್ವವೇದಾಂತ ಪಾಠಶಾಲಾ, ರಾಜಾಜಿನಗರ

ಪ್ರಕಾಶಕರು

ಪವನ-ಪರಿಮಳ ಪ್ರಸಾರಿಣಿ ಸಭಾ
ರಾಘವೇಂದ್ರ ಸ್ವಾಮಿಗಳ ಬೃಂದಾವನ ಸನ್ನಿಧಿ
ಪ್ರಕಾಶನಗರ, ರಾಜಾಜಿನಗರ ಬಡಾವಣೆ
ಬೆಂಗಳೂರು-560021

# SRI KRISHNASHTAKAM AND
# SRI DASHAVATHARA STHAVANAM

Translated by : **SRI K. SATHYANARAYANACHARYA**

Published by : 'Pavana Parimala Prasarini Sabha'
**Bangalore-21**

Price Rs. **1=75**

Printers : LEKHA MUDRANA
B' lore-560010

ಪ್ರತಿಗಳು ದೊರೆಯುವ ಸ್ಥಳ :

1) ವೇದಾಂತ ಬುಕ್ ಹೌಸ್
ಉಮಾ ಟಾಕೀಸ್ ಪಕ್ಕ
ಚಾಮರಾಜಪೇಟೆ, ಬೆಂಗಳೂರು-18

2) ಶ್ರೀ ರಾಘವೇಂದ್ರ ಸ್ವಾಮಿಗಳ ಬೃಂದಾವನ ಸನ್ನಿಧಿ
ಪ್ರಕಾಶನಗರ, ರಾಜಾಜಿನಗರ ಬಡಾವಣೆ
ಬೆಂಗಳೂರು_560021

# ಪ್ರಕಾಶಕರ ನುಡಿ

ಬೆಂಗಳೂರು ರಾಜಾಜಿನಗರದ ಬಡಾವಣೆಯ ಭಕ್ತವೃಂದದವರಿಗೆ ಶ್ರೀ ಶ್ರೀ ಗುರುರಾಜರ ದರ್ಶನಾದಿ ಸೇವೆಗಾಗಿ ಶ್ರೀ ಗುರುರಾಜರ ಸನ್ನಿಧಿಯ ಅವಶ್ಯಕತೆಯು ಉತ್ಕಟವಾಗಿ ಅವಶ್ಯಕವಾಗಿದ್ದು ಅದನ್ನು ನೆರವೇರಿಸಲೋಸುಗ ಹಾಗೂ ತಾವು ಅರ್ಜನೆ ಮಾಡಿದ ಹಣದ ಸದುಪಯೋಗಪಡಿಸಲೋಸುಗ ನಮ್ಮ ಪೂಜ್ಯ ತಂದೆಯವರಾದ ದಿ|| ನಂದಗುಂಡಿ ರಾಮಚಂದ್ರರಾಯರು ರಾಜಾಜಿನಗರದ ಬಡಾವಣೆಯಾದ ಪ್ರಕಾಶನಗರದಲ್ಲಿ 1959 ಜೂನ್ 24 (ಜ್ಯೇಷ್ಠ ಶುದ್ಧ ತ್ರಯೋದಶಿ) ಶುಭದಿನದಂದು ಗುರುಹಿರಿಯರ ಪಂಡಿತರುಗಳ ಸಮ್ಮುಖದಲ್ಲಿ ವಿಜೃಂಭಣೆಯಿಂದ "ಕ್ಷಿಪ್ರ ಪ್ರಸಾದ ಶ್ರೀ ಆಂಜನೇಯ ಮತ್ತು ಶ್ರೀ ಶ್ರೀ ರಾಘವೇಂದ್ರಸ್ವಾಮಿಗಳ" ಬೃಂದಾವನವನ್ನು ಪ್ರತಿಷ್ಠಾಪಿಸಿದರು. ಅವರು ತಮ್ಮ ಕಾಲದಲ್ಲಿಯೇ ಕಟ್ಟಡದ ಅಭಿವೃದ್ಧಿಕಾರ್ಯವನ್ನು ನೆರವೇರಿಸಿ 1970 ರಲ್ಲಿ ಹರಿಪದವನ್ನು ಸೇರಿದರು.

ಅನಂತರ ಗುರುಹಿರಿಯರ ಅನುಗ್ರಹದಿಂದ ಹಾಗೂ ನಮ್ಮ ತಂದೆಯವರ ಆಶೀರ್ವಾದ ಬಲದಿಂದ ಶ್ರೀ ಗುರುರಾಜರ ಸನ್ನಿಧಿಗೆ ಬರುವ ಭಕ್ತ ವೃಂದದವರಿಗೆ ಬೇಕಾದ ಸೇವಾನುಕೂಲತೆ, ಹವ್ಯಕವ್ಯಾದಿಗಳ ಅನುಕೂಲತೆ ಹಾಗೂ ಬಹುಮುಖ್ಯ ಕಾರ್ಯವಾದ ತತ್ವಜ್ಞಾನ ಪ್ರಚಾರ ಕಾರ್ಯಕ್ಕಾಗಿ ಆಗಾಗ್ಗೆ ಉಪನ್ಯಾಸ ಪುರಾಣ ಪ್ರವಚನಗಳನ್ನು ನಡೆಸಿಕೊಂಡು ಬರುತ್ತಲಿದ್ದು ಈ ಜ್ಞಾನ ಪ್ರಸಾರ ಕಾರ್ಯದಲ್ಲಿ ಮುನ್ನಡೆಯಬೇಕೆಂಬ ಇಚ್ಛೆಯಿಂದ ಕಳೆದ ಗುರುರಾಜರ ಆರಾಧನಾ ಸಂದರ್ಭದಲ್ಲಿ "ಪವನ ಪರಿಮಳ ಪ್ರಸಾರಿಣೀ ಸಭಾ" ಎಂಬ ವಿದ್ವತ್ಸಭೆಯನ್ನು ಪ್ರತಿವರ್ಷವೂ ನಡೆಸುವಂತೆ ಏರ್ಪಡಿಸಿ, ಅದರ ಉದ್ಘಾಟನೆಯನ್ನು ಶ್ರೀ ಶ್ರೀ ಕುಂದಾಪುರ ವ್ಯಾಸರಾಜಮಠಾದೀಶರು ನೆರವೇರಿಸಿದರು, ಇದುವರೆಗೂ ಮುದ್ರಿತವಾಗದಂತಹ ಸಣ್ಣ ಸಣ್ಣ ಸ್ತೋತ್ರಗಳು ಶ್ರೀಮದಾಚಾರ್ಯರ ತತ್ವಕ್ಕೆ ಸಂಬಂಧಿಸಿದ ಗ್ರಂಥಗಳನ್ನು ಕನ್ನಡ ಅನುವಾದಸಹಿತ ಪ್ರಕಟಪಡಿಸಬೇಕೆಂಬ ಆಕಾಂಕ್ಷೆಯ ಮೇರೆಗೆ ಪ್ರಥಮ ಕುಸುಮವಾಗಿ ಶ್ರೀಮದ್ವಾದಿರಾಜಪೂಜ್ಯ ಚರಣಕೃತ ಶ್ರೀ ಕೃಷ್ಣಾಷ್ಟಕ ಮತ್ತು ಮಂತ್ರಾಲಯ ಪ್ರಭುಗಳ ವಿರಚಿತ ದಶಾವತಾರ ಸ್ತುತಿಯನ್ನು ಕನ್ನಡ ಅನುವಾದಸಹಿತ ಹೊರತರುತ್ತಿದ್ದೇವೆ.

ಈ ಜ್ಞಾನ ಪ್ರಸಾರ ಕಾರ್ಯಕ್ಕೆ ಎಂದಿಗೂ ನಮಗೆ ಮಾರ್ಗದರ್ಶನ ಮಾಡಿಸಿ, ಈ ಸ್ತೋತ್ರದ್ವಯಗಳ ಅನುವಾದಕಾರ್ಯ, ಮುದ್ರಣದ ತಿದ್ದುಪಡಿ ಕಾರ್ಯವನ್ನು ನೆರವೇರಿಸಿಕೊಟ್ಟ ಮಾಧ್ವ ವೇದಾಂತ ಪಾಠಶಾಲೆಯ ಮ|| ಶಾ|| ಸಂ|| ಶ್ರೀ ಕೆ. ಸತ್ಯನಾರಾಯಣಾಚಾರ್ಯರಿಗೂ, ಈ ಅನುವಾದಕ್ಕೆ ಶುಭಕೋರಿ ಆಶೀರ್ವದಿಸಿರುವ ಶ್ರೀಪಾದಪುತ್ರ, ವಿದ್ಯಾವಾಚಸ್ಪತಿ. ಕವಿ ತಿಲಕ, ವೇದಾಂತ ಶಿರೋಮಣಿ ರಾಜಾ. ಎಸ್. ಗುರುರಾಜಾಚಾರ್ಯರಿಗೂ ಮತ್ತು ಈ ಗ್ರಂಥವನ್ನು ಸಕಾಲದಲ್ಲಿ ಅಂದವಾಗಿ ಮುದ್ರಿಸಿಕೊಟ್ಟಿರುವ ಮಿತ್ರರೂ ರಾಯರ ಅಂತರಂಗ ಭಕ್ತರೂ ಲೇಖಾಮುದ್ರಣದ

ಮಾಲೀಕರೂ ಆದ ಶ್ರೀ ಟಿ. ಕೆ. ತಮ್ಮಾಜಿಯವರಿಗೂ ನಮ್ಮ ಹೃತ್ಪೂರ್ವಕ ಕೃತಜ್ಞತೆಗಳು. ಈ ಕೃತಿಯನ್ನು ಸಜ್ಜನರು ಸದುಪಯೋಗಪಡಿಸಿಕೊಂಡು ಗುರುರಾಜರ ಅನುಗ್ರಹಕ್ಕೆ ಪಾತ್ರರಾಗ ಬೇಕೆಂದು ಕೋರುವ

ಸಜ್ಜನ ವಿಧೇಯರು

ಬೆಂಗಳೂರು
25-11-81

**ಎನ್. ಆರ್. ಗೋವಿಂದರಾವ್**
**ಮತ್ತು ಸಹೋದರರು**

ಪವನ ಪರಿಮಳ ಪ್ರಸಾರಿಣೀ ಸಭಾ
ಶ್ರೀರಾಘವೇಂದ್ರಸ್ವಾಮಿಗಳ ಸನ್ನಿಧಿ
ಪ್ರಕಾಶನಗರ, ಬೆಂಗಳೂರು-21



ಶ್ರೀ ಗುರುರಾಜೋ ವಿಜಯತೇ

ವಿದ್ಯಾವಾಚಸ್ಪತಿ, ವಿದ್ಯಾರತ್ನವ್
ವೈದಿಕ ವಾಙ್ಮಯ ವಿದ್ವನ್ಮಣಿ
ರಾಜಾ S. ಗುರುರಾಜಾಚಾರ್ಯ
ನಂಜನಗೂಡು

ಮೊಕ್ಕಾಂ, ಬೆಂಗಳೂರು
16-8-81

# ಆಶೀರ್ವಚನ

ಜಗದ್ಗುರು ಶ್ರೀ ರಾಘವೇಂದ್ರ ಸ್ವಾಮಿಗಳವರು ಇಂದು ಕಲಿಯುಗ ಕಾಮಧೇನು, ಕಲ್ಪ ವೃಕ್ಷದಂತೆ ಭಕ್ತಜನರ ಮನೋಭೀಷ್ಟಗಳನ್ನು ಸಲ್ಲಿಸುತ್ತಾ ವಿಶ್ವಗುರುಗಳೆಂದು ಸರ್ವರಿಂದ ಮಾನ್ಯ ರಾಗಿದ್ದಾರೆ. ಶ್ರೀ ಗುರುರಾಜರು ಪ್ರಸ್ಥಾನತ್ರಯದ ಮೇಲೆ ಅನಿತರ ಸಾಧಾರಣ ಗ್ರಂಥಗಳನ್ನು ರಚಿಸಿ ಭಾರತೀಯ ವೇದಾಂತ ಸಾಹಿತ್ಯಾದಿ ವಾಙ್ಮಯ ಭಂಡಾರಕ್ಕೆ ಅನಿತರ ಸಾಧಾರಣ ಕೊಡುಗೆ ಗಳನ್ನಿತ್ತು ಪರಮಾನುಗ್ರಹ ಮಾಡಿದ್ದಾರೆ.

ಶ್ರೀ ಗುರುರಾಜರ ಜೀವನ, ಗ್ರಂಥ ರಚನೆ, ಜಗತ್ಕಲ್ಯಾಣಾದಿಗಳನ್ನು ನಿರೂಪಿಸಲೆಂದೇ ಅವರ ಸೋದರಳಿಯಂದಿರಾದ ಶ್ರೀ ನಾರಾಯಣಾಚಾರ್ಯರು 'ಶ್ರೀ ರಾಘವೇಂದ್ರ ವಿಜಯ' ವೆಂಬ ಮಹಾ ಕಾವ್ಯವನ್ನು ರಚಿಸಿದ್ದಾರೆ. ಅದರಲ್ಲಿ ಶ್ರೀ ಗುರುರಾಜರು 'ದಶಾವತಾರ' ಗಳನ್ನು ಸ್ತುತಿಸಿದ ಕೆಲ ಪದ್ಯಗಳನ್ನು ಕವಿಗಳು ಕಾವ್ಯದಲ್ಲಿ ಸೇರಿಸಿ ವರ್ಣಿಸಿದ್ದಾರೆ.

ಈ 'ದಶಾವತಾರಸ್ತವನ' ವು ಶ್ರೀ ಗುರುರಾಜರ ವದನಾಂಬುಜದಿಂದ ಹೊರಹೊಮ್ಮಿತೆಂದೂ ಅದನ್ನು ಕವಿಗಳು ಹಾಗೆಯೇ ಕಾವ್ಯದಲ್ಲಿ ಅಳವಡಿಸಿದ್ದಾರೆ ಎಂದೂ ಶ್ರೀಮಠದಲ್ಲಿ ಮತ್ತು ಶ್ರೀ ರಾಯರ ಪೂರ್ವಾಶ್ರಮ ವಂಶೀಯರಲ್ಲಿ ಪರಂಪರೆಯಿಂದ ನಂಬಲಾಗಿರುತ್ತದೆ. ಈ 'ದಶಾವತಾರ ಸ್ತವನ' ವನ್ನು ನಾವು 26 ವರ್ಷಗಳ ಹಿಂದೆಯೇ ತಾತ್ಪರ್ಯಸಹಿತ ಪ್ರಕಟಿಸಿರುವುದನ್ನು ಇಲ್ಲಿ ಸ್ಮರಿಸಬಯಸುತ್ತೇವೆ.

ಪ್ರಕೃತ ಪಂಡಿತ ಶ್ರೀ ಕೆ. ಸತ್ಯನಾರಾಯಣಾಚಾರ್ಯ, ಶ್ರೀಮಾಧ್ವ ವೇದಾಂತ ಪಾಠಶಾಲಾ ರಾಜಾಜಿನಗರ, ಬೆಂಗಳೂರು ಇವರು ಬಹಳ ಶ್ರಮವಹಿಸಿ ಭಕ್ತಿಶ್ರದ್ಧೆಗಳಿಂದ ಕನ್ನಡದಲ್ಲಿ ಅನುವಾದ ಮಾಡಿದ್ದಾರೆ. ಅನುವಾದವು ಅತ್ಯಂತ ಸುಂದರ ಸರಳವಾಗಿದ್ದು ವಿದ್ವತ್ಪೂರ್ಣವಾಗಿದೆ. ಅನ್ವಯಾರ್ಥ, ತಾತ್ಪರ್ಯ, ವಿಶೇಷಾಂಶಗಳಿಂದ ಕೂಡಿರುವ ಶ್ರೀ ಸತ್ಯನಾರಾಯಣಾಚಾರ್ಯರ ಅನುವಾದವು ಸರ್ವ ಸಜ್ಜನರಿಗೆ ಸಂತೋಷಜನಕವಾಗುವುದೆಂಬುದರಲ್ಲಿ ಸಂದೇಹವಿಲ್ಲ.

ಬೆಂಗಳೂರಿನ ಐ. ಟಿ. ಐ. ನಲ್ಲಿ ಇಂಜನೀಯರಾದಿರುವ ಶ್ರೀ ಸತ್ಯನಾರಾಯಣಾಚಾರ್ಯರು ಲೌಕಿಕ ಮಾತ್ರವಲ್ಲದೇ ವೈದಿಕವಾಗಿಯೂ ಸರ್ವದಾ ಕಾರ್ಯಾಸನ್ನರಾಗಿದ್ದು, ಉಪನ್ಯಾಸ, ವೇದಾಂ

ತಾದಿ ಪಾಠಪ್ರವಚನ, ಪುರಾಣಾದಿ ಸತ್ಕಾರ್ಯಾಸಕ್ತರಾಗಿ ಜನತೆಯ ಗೌರವಾದರಗಳಿಗೆ ಪಾತ್ರರಾಗಿದ್ದು ನಮ್ಮ ಪ್ರೀತಿಪಾತ್ರ ಶಿಷ್ಯರಾಗಿದ್ದಾರೆ. ಶ್ರೀ ಗುರುರಾಜರ ಪರಮ ಭಕ್ತರಾದ ಇವರ ಅನುವಾದವು ಶ್ರೀ ರಾಯರ ಭಕ್ತರೆಲ್ಲರಿಗೂ ಉಪಕಾರವಾಗುವುದೆಂದು ನಂಬಿದ್ದೇವೆ. ರಾಜಾಜಿನಗರದ ಶ್ರೀ ಗುರುರಾಜರ ಬೃಂದಾವನ ಸನ್ನಿಧಿಯವರು ಶ್ರೀ ರಾಯರ ಆರಾಧನಾ ಸ್ಮರಣೆಗಾಗಿ ಈ ಗ್ರಂಥವನ್ನು ಪ್ರಕಟಿಸಿ ಸರ್ವರ ಗೌರವಕ್ಕೆ ಪಾತ್ರರಾಗಿದ್ದಾರೆ. ಶ್ರೀ ಸತ್ಯನಾರಾಯಣಾಚಾರ್ಯರು ಇನ್ನೂ ಅನೇಕ ಕೃತಿಗಳನ್ನು ರಚಿಸಲು ಉಪಕಾರ ಮಾಡುವಂತೆ ಶ್ರೀ ರಾಯರು ಅನುಗ್ರಹಿಸಲಿ ಎಂದು ಆಶಿಸಿ ಆಶೀರ್ವದಿಸುತ್ತೇವೆ.

ಇತಿ ವಿದ್ವಜ್ಜನತೆದಾಸರು
ರಾಜಾ ಎಸ್. ಗುರುರಾಜಾಚಾರ್ಯ

# ಗ್ರಂಥ ಪ್ರಸ್ತಾವನೆ

ಕೃಷ್ಣಂ ವಂದೇ ಮಂಥಪಾಶಧರಂ ದಿವ್ಯಾರ್ಭಕಾ ಕೃತಿಂ ।
ಶಿಖಾಬಂಧಂ ತ್ರಯೋಪೇತಂ ಭೈಷ್ಮೀಮಧ್ವಕರಾರ್ಚಿತಂ ॥
ತಪೋವಿದ್ಯಾವಿರಕ್ತ್ಯಾದಿ ಸದ್ಗುಣೌಘಾಕರಾನಹಂ ।
ವಾದಿರಾಜ ಗುರೂನ್ವಂದೇ ಹಯಗ್ರೀವದಯಾಶ್ರಯಾನ್ ॥
ಮೂಕೋಪಿ ಯತ್ ಪ್ರಸಾದೇನ ಮುಕುಂದಶಯನಾಯತೆ ।
ರಾಜರಾಜಯತೇರಿಕ್ತೋ ರಾಘವೇಂದ್ರಂ ತಮಾಶ್ರಯೇ ॥

ಭಾವಿ ಸಮೀರ ಶ್ರೀಮದ್ವಾದಿರಾಜ ಪೂಜ್ಯ ಚರಣರು ಸಜ್ಜನರ ಅನುಗ್ರಹಾರ್ಥಕ್ಕೋಸ್ಕರವೇ 'ಕಲೌ ಶ್ರೀಕೃಷ್ಣ ಸಂಕೀರ್ತನಂ' ಎಂಬ ಉಕ್ತಿಯಂತೆ ಈ ಕೃಷ್ಣಾಷ್ಟಕವನ್ನು ರಚಿಸಿದ್ದಾರೆ. ಶ್ರೀ ಮಧ್ವ ಪ್ರತಿಷ್ಠಿತ ಉಡುಪಿಯ ಶ್ರೀಕೃಷ್ಣನು ದ್ವಾರಕೆಯನ್ನು ಬಿಟ್ಟು ಉಡುಪಿಯನ್ನೇ ಮನೆಯಾಗಿ ಮಾಡಿ ಕೊಂಡಿರುತ್ತಾನೆಂದು ವರ್ಣಿಸಿದ್ದಾರೆ. ಸಾಕ್ಷಾತ್ ರಮಾಸ್ವರೂಪರಾದ ರುಕ್ಮಿಣೀದೇವಿಯರಿಂದ ಪೂಜಿತವಾದ ಉಡುಪಿಯ ಶ್ರೀಕೃಷ್ಣನ ಸುಂದರವಾದ, ಮನೋಹರವಾದ ಅಂಗಾಂಗಗಳಿಗೂ ಪರ ಮಾತ್ಮನಿಗೂ ನಿತ್ಯ, ಅನುಪಮ ಅಭೇದ ಪ್ರಮೇಯವನ್ನು ಕಾವ್ಯದ ಸೊಬಗಿನಿಂದ ತಮ್ಮ ಕಾವ್ಯಾಂ ಜಲಿಯನ್ನೇ ಸಮರ್ಪಣಮಾಡಿದ್ದಾರೆ. ಈ ಅಷ್ಟಕವನ್ನು ಪ್ರತಿನಿತ್ಯ ಮಂಗಳಾರತಿ ನಂತರದಲ್ಲೂ, ಹರಿವಾಣ ಸೇವಾದಲ್ಲೂ ಪಠಿಸಿದವರಿಗೆ ಶ್ರೀಕೃಷ್ಣಾನುಗ್ರಹಕ್ಕೆ ಪಾತ್ರರಾಗುವುದರಲ್ಲಿ ಸಂದೇಹವೇ ಇಲ್ಲ.

ಇನ್ನು ಪ್ರಹ್ಲಾದಾಂಶರಾದ, ಶ್ರೀ ವಾಯುದೇವರ ವಿಶೇಷ ಆವೇಶಯುಕ್ತರಾದ ಶ್ರೀ ರಾಘ ವೇಂದ್ರ ಸ್ವಾಮಿಗಳು ಕಲಿಯುಗದ ಕಾಮಧೇನು, ಕಲ್ಪವೃಕ್ಷಕ್ಕೆ ಸಮರು. ಅವರು ಪ್ರತಿನಿತ್ಯದಲ್ಲೂ ಶ್ರೀದಶಾವತಾರಸ್ತುತಿಯನ್ನು ಹೇಳಿ ಅಷ್ಟು ಭಗವದ್ರೂಪಗಳನ್ನು ನೋಡಿ ತಮ್ಮ ವಾಕ್ ಗಂಗಾ ವನ್ನೂ ಸಜ್ಜನರ ಮೇಲೆ ಹರಿಸಿದ್ದಾರೆ. ಶ್ರೀ ಪರಿಮಳಾಚಾರ್ಯರ ಅಸದೃಶಕಾವ್ಯಶಕ್ತಿ, ಸಿದ್ಧಾಂ ತೋಕ್ತಿಗಳಿಂದ ಕೂಡಿದ್ದು ಅತಿ ಚಮತ್ಕಾರವಾಗಿ ಸ್ತೋತ್ರಮಾಡಿರುತ್ತಾರೆ. ಮಂತ್ರಾಲಯ ಪ್ರಭು ಗಳ ಕೃತಿಗಳೆಂದರೆ ಮಂತ್ರಪ್ರಾಯವೇ ಆಗಿದ್ದು ಹರಿಗುರುಗಳನ್ನು ಭಜಿಸಿದವರಿಗೆ ಅನಿಷ್ಟನಿವೃತ್ತಿ ಪೂರ್ವಕ ಇಷ್ಟಪ್ರಾಪ್ತಿ ಆಗುವುದೆಂದು ಅನೇಕ ಹರಿದಾಸರು ಹಾಡಿದ್ದಾರೆ. ರಾಯರ ಸೇವಾ ಮಾಡುವುದೆಂದರೆ ಅವರ ಕೃತಿಗಳನ್ನು ಪಠಿಸಿ, ಅವರ ಗ್ರಂಥದಲ್ಲಿ ಶ್ರೀಮದಾಚಾರ್ಯರ ಸಿದ್ಧಾಂತ ಪ್ರಮೇಯಗಳನ್ನು ಅರಿತು ಸದ್ಗತಿ ಹೊಂದುವುದಕ್ಕಾಗಿಯೇ ಈ ಎರಡು ಕಾವ್ಯಗಳ ಕನ್ನಡ ಅನು ವಾದವನ್ನು ಶ್ರೀ ಗುರುರಾಜರೇ ನನ್ನಲ್ಲಿ ನಿಂತು ನನ್ನ ಮತಿಗೆ ಯೋಗ್ಯತೆಗೆ ಎಷ್ಟೋ ಅಷ್ಟು ನುಡಿ

ಸಿರುತ್ತಾರೆ. ಪಂಡಿತರು ಕೇವಲ ಗುಣವನ್ನು ಗ್ರಾಹ್ಯಮಾಡಿ ತಪ್ಪುಗಳನ್ನು ಕ್ಷಮಿಸಬೇಕೆಂದು ಮತ್ತೊಮ್ಮೆ ಸಜ್ಜನರಲ್ಲಿ ಪ್ರಾರ್ಥಿಸುತ್ತೇನೆ. ಈ ಅನುವಾದವನ್ನು ಮಾಡಲಿಕ್ಕೆ ಬೋಧಿಸಿದವರು ಮತ್ತು ಆಜ್ಞೆಮಾಡಿದವರು ಪೂಜ್ಯಶ್ರೀ ಎಲಮೇಲಿ ವಾಸುದೇವಾಚಾರ್ಯರು. ಸದಾ ಮಧ್ವಶಾಸ್ತ್ರ ಪಾಠಪ್ರವಚನದಲ್ಲೇ ನಿರತರಾದ ಆಚಾರ್ಯರ ಕರುಣೆಯೇ ಈ ಅನುವಾದಕ್ಕೆ ಪ್ರೇರಕ. ಈ ಕೃತಿಯನ್ನು ಪ್ರಕಾಶಕ್ಕೆ ತಂದು ಸರ್ವಜನರಿಗೂ ರಾಯರ ಅನುಗ್ರಹವಾಗಬೇಕೆಂದು ದೀಕ್ಷಿತರಾಗಿರುವ ಪ್ರಕಾಶನಗರದ ಶ್ರೀ ರಾಘವೇಂದ್ರ ಸ್ವಾಮಿಗಳ ಬೃಂದಾವನ ಸೇವಕರಾದ ಎನ್. ಆರ್. ಗೋವಿಂದ ರಾವ್ ಮತ್ತು ಸಹೋದರರಿಗೆ ಇತೋಪ್ಯತಿಶಯ ಶ್ರೇಯಸ್ಸಾಗಲೆಂದು ಶ್ರೀ ರಾಯರಲ್ಲಿ ಪ್ರಣಾಮ ಸಮರ್ಪಿಸಿ ಉಪರಮಿಸುತ್ತೇನೆ.

ದುರ್ಮತಿ ಸಂ|| ಶ್ರಾವಣ
ಬಹುಳ ದ್ವಿತಿಯಾ
ರಾಯರ ಆರಾಧನಾ ಮಹೋತ್ಸವ

ಇತಿ ಸಜ್ಜನದಾಸರ ದಾಸ
ಕೆ. ಸತ್ಯನಾರಾಯಣಾಚಾರ್ಯ
ಮಾಧ್ವವೇದಾಂತ ಪಾಠಶಾಲಾ
ರಾಜಾಜಿನಗರ

సమస్తగుణ సంపూర్ణాంతు
[illegible] దూరాంతు విష్ణవే|
సమస్త ప్రాణినా ధారంతు
భక్తేష్ట ప్రదాయినే||

# ಶ್ರೀಕೃಷ್ಣಾಷ್ಟಕಂ

ಶ್ರೀಮದ್ವಾದಿರಾಜಗುರ್ವಂತರ್ಗತ ಮಧ್ವಪತಿ ಶ್ರೀಲಕ್ಷ್ಮೀಹಯಗ್ರೀವಾಯ ನಮಃ ಹರಿಃ ಓಂ

**ಶ್ಲೋಕ : ಪಾಲಯಾಚ್ಯುತ ಪಾಲಯಾಜಿತ ಪಾಲಯ ಕಮಲಾಲಯ।**
**ಲೀಲಯಾಧೃತ ಭೂಧರಾಂಬುರು ಹೋದರಸ್ವಜನೋದರ ॥ಧ್ರು॥**

**ಅರ್ಥ :** ಹೇ ಅಚ್ಯುತ=ಎಲೈ ಅಚ್ಯುತನೆ (ಚತುರ್ವಿಧ ನಾಶ ಇಲ್ಲದವನಿಗೆ ಅಚ್ಯುತ ಎಂದು. ನ ಚ್ಯುತಃ=ಅಚ್ಯುತಃ)(ಮಾಂ)ಪಾಲಯ= (ನನ್ನನ್ನು) ರಕ್ಷಿಸು. ಹೇ ಅಜಿತ= ದೇವೇಂದ್ರನಿಂದ ನಿನ್ನನ್ನು ಗೆಲ್ಲಲಾಗದ್ದರಿಂದ, ಅಜಿತನಾಮಕ ವಿಷ್ಣುವೇ (ಮಾಂ) ಪಾಲಯ= (ನನ್ನನ್ನು) ರಕ್ಷಿಸು. ಲೀಲಯಾಧೃತ ಭೂಧರ=ಅನಾಯಾಸವಾಗಿ ಲೀಲೆ ಯಿಂದ ಗೋವರ್ಧನ ಪರ್ವತವನ್ನು ಕಿರುಬೆರಳಿನಿಂದ ಎತ್ತಿದವನೇ,! ಕಮಲಾಲಯ = ಬ್ರಹ್ಮನಿಗಿಂತಲೂ ಉತ್ತಮಳಾದ ಲಕ್ಷ್ಮೀದೇವಿಗೆ ಆಶ್ರಯನಾದವನೇ, ಅಂಬುರು ಹೋದರ=ಹೊಟ್ಟೆಯಲ್ಲಿ ಸಕಲ ಲೋಕಕ್ಕೂ ಉತ್ಪತ್ತಿಸ್ಥಾನವಾದ ಲೋಕಕಮಲ ವನ್ನಿಟ್ಟುಕೊಂಡಿರುವವನೇ, ಸ್ವಜನೋದರ=ಸ್ವಭಕ್ತರಾದ ಬ್ರಹ್ಮಾದಿದೇವತೆಗಳನ್ನು ಸೃಷ್ಟಿಸಿ ಕ್ರೀಡಿಸುವವನೇ, ಹೇ ಉಡುಪಿಯ ಶ್ರೀಕೃಷ್ಣನೇ, ಪಾಲಯ=(ನನ್ನನ್ನು) ಕಾಪಾಡು.

**ತಾತ್ಪರ್ಯ :** ಅನಿತ್ಯತ್ವ, ದೇಹಹಾನಿ, ದುಃಖಪ್ರಾಪ್ತಿ, ಅಪೂರ್ಣತಾ ಎಂಬ ನಾಲ್ಕು ವಿಧ ನಾಶಗಳು ಎಲ್ಲಾ ಜೀವರಲ್ಲೂ ಮತ್ತು ಅಪೂರ್ಣತಾ ಎಂಬ ನಾಶ ಲಕ್ಷ್ಮೀದೇವಿ ಯರಲ್ಲೂ ಇದೆ. ಈ ನಾಶಗಳು ಪರಮಾತ್ಮನಾದ ನಾರಾಯಣನಿಗೆ ಇಲ್ಲವಾದ್ದರಿಂದ ಅಚ್ಯುತ ಎಂದು ಕರೆಯಲ್ಪಡುತ್ತಾನೆ. ದೇವೇಂದ್ರನಿಂದ ಗೆಲ್ಲಲಾಗದ್ದರಿಂದ ಅಜಿತ ನೆಂದೂ, ಲೀಲೆಯಿಂದ ಗೋವರ್ಧನ ಪರ್ವತವನ್ನು ಎತ್ತಿ ಬ್ರಹ್ಮದೇವರಿಗೂ ನಿಯಾ ಮಕಳಾದ ಲಕ್ಷ್ಮೀದೇವಿಯರಿಗೆ ಆಶ್ರಯನಾದ್ದರಿಂದ ಕ್ಷರಾಕ್ಷರಪುರುಷರಿಗಿಂತಲೂ ಉತ್ತಮನೆಂದು. ಸಕಲ ಲೋಕಕ್ಕೂ ಆಶ್ರಯ ಭೂತವಾದ ಚತುರ್ದಶ ಕಮಲವನ್ನು ತನ್ನ ಉದರದಲ್ಲಿ ಧರಿಸಿರುವುದರಿಂದ ಸರ್ವಕರ್ತನೆಂತಲೂ ಅಂಥಾ ಸರ್ವೋತ್ತಮನಾದ ಉಡುಪಿಯ ಶ್ರೀಕೃಷ್ಣನೇ ನನ್ನನ್ನು ಕಾಪಾಡು ಎಂದು ಅನನ್ಯ ಭಕ್ತಿಯಿಂದ ಶ್ರೀವಾದಿ ರಾಜ ಶ್ರೀಚರಣರು ಸ್ತೋತ್ರ ಮಾಡುತ್ತಾರೆ.

ವಿಷಯ : ಈ ಮೇಲಿನ ಧ್ರುವ ಪದದಲ್ಲಿ ಶ್ರೀವಾದಿರಾಜರು ಮಧ್ವಮತದ ಪ್ರಮೇಯ ಗಳೆಲ್ಲವನ್ನೂ ಅಳವಡಿಸಿ ಸ್ತೋತ್ರ ಮಾಡಿದ್ದಾರೆ. "ಉತ್ತಮ ಪುರುಷಸ್ತ್ವನ್ಯಃ ಪರ ಮಾತ್ಮೇತ್ಯುದಾಹೃತಃ" ಎಂಬ ಗೀತಾ ಉಕ್ತಿಯಂತೆ ಕ್ಷರಪುರುಷರಾದ ಬ್ರಹ್ಮಾದಿ ಸಕಲ ಜೀವರೂ, ಅಕ್ಷರ ಪುರುಷಳಾದ ಶ್ರೀಲಕ್ಷ್ಮೀದೇವಿಯರಿಗೂ ಆಶ್ರಯನಾಗಿ

ದ್ದಾನೆ. ಆದ್ದರಿಂದ ಸರ್ವೋತ್ತಮ. ಚತುರ್ದಶ ಲೋಕಗಳನ್ನು ಸೃಷ್ಟಿ ಮಾಡಿದ್ದಾನೆ. ಆದ್ದರಿಂದ ಜಗತ್ತು ಸತ್ಯ, ಜೀವರುಗಳು ಪರಸ್ಪರ ಭಿನ್ನರು ಮತ್ತು ಹರಿಯ ಅನುಚರರು ಎಂಬುದನ್ನು ಕಮಲಾಲಯ ಮತ್ತು ಅಂಬುರುಹೋದರ ಎಂಬ ಪದದಿಂದಲೂ ಜೀವರುಗಳು ತಾರತಮ್ಯೋಪೇತರು ಎಂಬುದನ್ನು ಕಮಲಾಲಯ ಮತ್ತು ಅಜಿತನೆಂಬ ಪದದಿಂದಲೂ, ಅಚ್ಯುತನೆಂಬ ಪದದಿಂದ ನಿತ್ಯನೂ ದೋಷದೂರನೂ ಆದ ಶ್ರೀ ಕೃಷ್ಣನೇ ನಿತ್ಯಸುಖವಾದ ಮುಕ್ತಿಗೆ ಕಾರಣ, ಆ ಅನನ್ಯ ಭಕ್ತಿಯು ನಿರಂತರವಾಗಿ ಬರಬೇಕೆಂದು ಪಾಲಯ ಪಾಲಯ ಎಂದು ಸ್ತೋತ್ರ ಮಾಡುತ್ತಾರೆ.

**ಮಧ್ವಮಾನಸಪದ್ಮಭಾನುಸಮಂ ಸ್ಮರ ಪ್ರತಿಸಂಸ್ಮರ**
**ಸ್ನಿಗ್ಧನಿರ್ಮಲ ಶೀತಕಾಂತಿಲಸನ್ಮುಖಂ ಕರುಣೋನ್ಮುಖಂ ।**
**ಹೃದ್ಯಕಂಬು ಸಮಾನಕಂಧರಮಕ್ಷಯಂ ದುರಿತಕ್ಷಯಂ**
**ಸ್ನಿಗ್ಧಸಂಸ್ತುತ ರೌಪ್ಯಪೀಠಕೃತಾಲಯಂ ಹರಿಮಾಲಯಂ ॥೧॥**

ಅರ್ಥ : (ಹೇ ಮನಃ)= ಎಲೈ ಮನವೇ, ಮಧ್ವಮಾನಸಪದ್ಮಭಾನುಸಮಂ = ಶ್ರೀ ಮಧ್ವಾಚಾರ್ಯರ ಮನವೆಂಬ ಕಮಲಕ್ಕೆ ಸೂರ್ಯ ಸಮಾನನಾದ, ಸ್ನಿಗ್ಧನಿರ್ಮಲ ಶೀತಕಾಂತಿಲಸನ್ಮುಖಂ = ಸ್ನೇಹಯುಕ್ತವಾದ, ಭಕ್ತರ ತಾಪತ್ರಯಗಳನ್ನಡಗಿಸುವ, ಚಂದ್ರಮನಂತೆ ಮುಖವುಳ್ಳ, ಹೃದ್ಯಕಂಬುಸಮಾನಕಂಧರಂ = ಮನೋಹರವಾಗಿ ಶಂಖದಂತಿರುವ ಕುತ್ತಿಗೆಯುಳ್ಳ, ಅಕ್ಷಯಂ=ನಾಶವಿಲ್ಲದ, ದುರಿತಕ್ಷಯಂ=ಸಕಲ ಪಾಪಗಳ ನಾಶಕ್ಕೆ ಕಾರಣೀಭೂತನಾದ, ಕರುಣೋನ್ಮುಖಂ=ಸ್ವಭಕ್ತರನ್ನು ಕರುಣಿಸಲು ಉದ್ಯುಕ್ತನಾದ, ಸ್ನಿಗ್ಧಸಂಸ್ತುತ= ಸುದೃಢವಾದ ಸ್ನೇಹಯುಕ್ತ ಭಕ್ತರಿಂದ ಸುತ್ತಿಸಿ ಕೊಳ್ಳುವ, ರೌಪ್ಯಪೀಠಕೃತಾಲಯಂ = ಉಡುಪಿಯನ್ನೇ ಮನೆಯನ್ನಾಗಿ ಮಾಡಿಕೊಂಡಿರುವ ಹರಿಂ= ಶ್ರೀ ಮಧ್ವಪ್ರತಿಷ್ಠಿತ ಗೋಪಾಲಕೃಷ್ಣನನ್ನು, ಆ ಲಯಂ= ಮರಣ ಬರುವವರೆವಿಗೂ, ಪ್ರತಿ ಸಂಸ್ಮರ= ನಿರಂತರವಾಗಿ ಸ್ಮರಣೆ ಮಾಡು.

ತಾತ್ಪರ್ಯ : ಸಕಲೇಂದ್ರಿಯಗಳಲ್ಲಿ ಮನಸ್ಸು ಮುಖ್ಯ ಆ ಮನಸ್ಸನ್ನು ಸಂಬೋಧಿಸಿ ಹೇ ಮನವೇ ತ್ರೈಲೋಕ್ಯಾಚಾರ್ಯರಾದ ಮಧ್ವಾಚಾರ್ಯರ ಮನಸ್ಸಿಗೂ ಪ್ರೇರಕನಾದ, ಭಕ್ತರ ತಾಪತ್ರಯಗಳನ್ನು ನಿವಾರಿಸುವ ಮನೋಹರ ಮೂರ್ತಿಯಾದ ನಿತ್ಯನಾದ, ಸಕಲ ಪಾಪ ನಿವಾರಕನಾದ ರೌಪ್ಯ ಪೀಠವೇ (ಉಡುಪಿಯೇ) ಮನೆಯಾಗಿ ಮಾಡಿಕೊಂಡಿರುವ ಮಧ್ವ ಪ್ರತಿಷ್ಠಿತ ಗೋಪಾಲ ಕೃಷ್ಣನನ್ನು ಆಮರಣಪರ್ಯಂತ ಸ್ಮರಿಸುತ್ತಿರು ಎಂದು ಶ್ರೀವಾದಿರಾಜರು ಮನಸ್ಸಿಗೆ ಸಂಬೋಧಿಸುತ್ತಾರೆ. ಸಕಲ ಪಾಪ ಕ್ಷಯಕ್ಕೂ ಹರಿನಾಮಸ್ಮರಣವೇ ಪ್ರಾಯಶ್ಚಿತ್ತ ಎಂಬುದು ಈ ಶ್ಲೋಕದ ಭಾವ.

ಶ್ಲೋಕ : ಅಂಗದಾದಿ ಸುಶೋಭಿಪಾಣಿಯುಗೇನ ಸಂಕ್ಷುಭಿತೈನಸಂ
ತುಂಗಮಾಲ್ಯ ಮಣೀಂದ್ರಹಾರ ಸರೋರಸಂ ಖಲನೀರಸಂ
ಮಂಗಲಪ್ರದ ಮಂಥಧಾಮ ವಿರಾಜಿತಂ ಭಜಿತಾಜಿತಂ
ತಂ ಗೃಣೇವರರೌಪ್ಯಪೀಠಕೃತಾಲಯಂ ಹರಿಮಾಲಯಂ ॥೨॥

ಅರ್ಥ : ಭಜತಾ= ಭಜನೆ ಮಾಡುವವನಿಂದ, ಜಿತಂ= ಜಯಿಸಲ್ಪಟ್ಟ (ಭಕ್ತಪರಾಧೀನನಾದ) ಖಲನೀರಸಂ= ದುಷ್ಟರೊಡನೆ ಸ್ನೇಹಭಾವವಿಲ್ಲದವ, ಅಂಗದಾದಿ ಸುಶೋಭಿಪಾಣಿಯುಗೇನ= ಭುಜಕಿರೀಟ ಮುಂತಾದ ಆಭರಣಗಳಿಂದ ಶೋಭಿಸುವ ಕೈಗಳೆರಡರಿಂದ ಭಕ್ತರುಗಳ ಪಾಪ ನಾಶವನ್ನು ಮಾಡುವ, ತುಂಗಮಾಲ್ಯಮಣೀಂದ್ರಹಾರ ಸರೋರಸಂ= ಆಪಾದ ಕಂಠಪರ್ಯಂತ ಕೌಸ್ತುಭಾದಿ ಶ್ರೇಷ್ಠ ರತ್ನಗಳಿಂದಲೂ ಮಾಲೆಗಳಿಂದಲೂ ಕೂಡಿರುವ ಎದೆಯುಳ್ಳ, ಮಂಗಳಪ್ರದ ಮಂಥದಾಮ ವಿರಾಜಿತಂ= ಕಲ್ಯಾಣಕರವಾದ ಕಡೆಗೋಲಿನಿಂದಲೂ ಮಂತ್ತು ಹಗ್ಗದಿಂದಲೂ ಒಪ್ಪುತ್ತಿರುವ, ವರ ರೌಪ್ಯಪೀಠ ಕೃತಾಲಯಂ= ಶ್ರೇಷ್ಠವಾದ ಉಡುಪಿಯನ್ನೇ ಮನೆ ಮಾಡಿಕೊಂಡಿರುವ ತಂ= ಆ ಪ್ರಸಿದ್ಧನಾದ, ಹರಿಂ= ಶ್ರೀ ಕೃಷ್ಣನನ್ನು, ಆಲಯಂ= ಮರಣಪರ್ಯಂತ ಗೃಣೇ= ಸಂಕೀರ್ತನೆ ಮಾಡುವೆನು.

ತಾತ್ಪರ್ಯ : ಶ್ರೀ ವಾದಿರಾಜರು ಶ್ರೀ ಕೃಷ್ಣನನ್ನು ಸದಾ ಸಂಕೀರ್ತನೆ ಮಾಡಬೇಕೆಂದು ಹೇಳುತ್ತಾರೆ. ಸಜ್ಜನರಂತೆ ದುರ್ಜನರಿಗೆ ನಮ್ಮ ಸ್ವಾಮಿ ವಶನಾಗುವವನಲ್ಲ, ಕೇವಲ ಭಕ್ತ ಪರಾಧೀನ, ಅವರನ್ನು ಬಿಟ್ಟು ಇರಲಾರನೆಂದು, ಶ್ರೀ ಹರಿಯು ಕೌಸ್ತುಭಾದಿ ಮುತ್ತಿನ ಹಾರಗಳಿಂದಲೂ, ಕಡೆಗೋಲು ಹಗ್ಗವನ್ನು ಹಿಡಿದು ಉಡುಪಿಯನ್ನೇ ಮನೆಮಾಡಿಕೊಂಡಿರುವ ಶ್ರೀಕೃಷ್ಣನನ್ನು ಆಮರಣ ಪರ್ಯಂತ ಸಂಕೀರ್ತನೆ ಮಾಡಬೇಕೆಂದು ಉಪದೇಶಿಸುವರು.

ಶ್ಲೋಕ : ಪೀನರಮ್ಯತನೂದರಂ ಭಜ ಹೇ ಮನಃ ಶುಭ ಹೇ ಮನಃ
ಸ್ವಾನುಭಾವನಿದರ್ಶನಾಯ ದಿಶಂತಮರ್ಥಿಸುಶಂತಮಮ್
ಆನತೋಸ್ಮಿ ನಿಜಾರ್ಜುನಪ್ರಿಯಸಾಧಕಂ ಖಲಬಾಧಕಂ
ಹೀನತೋಜ್ಝಿತ ರೌಪ್ಯ ಪೀಠಕೃತಾಲಯಂ ಹರಿಮಾಲಯಂ ॥೩॥

ಅರ್ಥ : ಹೇಮನಃ= ಎಲೈ ಮನವೇ, ಪೀನರಮ್ಯತನೂದರಂ= ಪುಷ್ಟವಾಗಿ ಪರಿಶೋಭಿಸುವ, ಸ್ಥೂಲವಲ್ಲದ ಉದರದಿಂದ ಕೂಡಿದ, ನಃ= ನಮಗೆ, ಶುಭಹೇಮ= ಶುದ್ಧ ಬಂಗಾರದಂತೆ, ಸ್ವಾನುಭಾವ ನಿದರ್ಶನಾಯ = ತನ್ನ ಮಹಾತ್ಮೆಯನ್ನು ಚೆನ್ನಾಗಿ ಬಲ್ಲವನಿಗೆ ಅಪರೋಕ್ಷನಾಗುವ, ಅರ್ಥಿಸುಶಂತಮಂ= ಬೇಡುವವಗೆ ಹೆಚ್ಚಿನ

ಆನಂದವನ್ನು ಬೀರುವ ಮೋಕ್ಷವನ್ನು, ದಿಶಂತಂ= ಕೊಡುವ, ಹೀನತೋಜ್ಝಿತರೌಪ್ಯ ಪೀಠಕೃತಾಲಯಂ= ದೋಷದೂರನಾದ ಉಡುಪಿಯೇ ಆಲಯವಾಗಿರುವ, ಹರಿಂ= ಶ್ರೀಕೃಷ್ಣನನ್ನು, ಆಲಯಂ =ಆಮರಣಪರ್ಯಂತ, ಭಜ= ಭಜಿಸು. ನಿಜಾರ್ಜುನ ಪ್ರಿಯಸಾಧಕಂ= ತನ್ನ ಸ್ವಕೀಯನಾದ ಅರ್ಜುನನ ಹಿತವನ್ನೇ, ಸಾಧಕಂ =ಸಾಧಿಸುವ ಖಲಬಾಧಕಂ= ದುಷ್ಟರನ್ನು ಬಾದಿಸುವ (ದುಷ್ಟನಿಗ್ರಹ ಶಿಷ್ಟಪರಿಪಾಲನಶೀಲನಾದ) ಹರಯೇ= ಶ್ರೀಕೃಷ್ಣಗೆ, ಆನತಃ ಅಸ್ಮಿ= ಬಾಗಿನಮಿಸುವೆನು.

ತಾತ್ಪರ್ಯ : ಸಕಲ ದೋಷದೂರನು, ಸರ್ವಗುಣಸಂಪನ್ನನು, ಸ್ವಭಕ್ತರು ಬೇಡುವ ಇಷ್ಟಾರ್ಥಗಳನ್ನು ಕೊಡುವವನೂ ಸುಂದರಾಂಗನೂ ಆದ ಶ್ರೀಹರಿಯನ್ನು ಆಮರಣ ಪರ್ಯಂತ ಭಜಿಸುಮನವೇ, ಎಂದು ರಾಜರು ಶ್ರೀಕೃಷ್ಣನ ಗುಣಗಳನ್ನು ಕೊಂಡಾಡು ತ್ತಾರೆ.

ಶ್ಲೋಕ : **ಹೇಮಕಿಂಕಿಣಿಮಾಲಿಕಾರಸನಾಂಚಿತಂ ತಮವಂಚಿತಂ**
**ರತ್ನಕಾಂಚನ ವಸ್ತ್ರಚಿತ್ರಕಟಿಂ ಘನಪ್ರಭಯಾ ಘನಮ್ ।**
**ಕಮ್ರನಾಗಕರೋಪಮೋರುಮನಾಮಯಂ ಶುಭಧೀಮಯಂ**
**ನೌಮ್ಯಹಂ ವರ ರೌಪ್ಯಪೀಠ ಕೃತಾಲಯಂ ಹರಿಮಾಲಯಂ ॥೪॥**

**ಅರ್ಥ:**ಅನಾಮಯಂ= ಭವರೋಗಗಳನ್ನೆಲ್ಲಾ ವಾರಣಮಾಡಲು ಶಕ್ತನಾದ, ಅವಂಚಿತಂ =ವಂಚನೆಯಿಲ್ಲದ, ಶುಭಧೀಮಯಂ= ಶರಣು ಹೊಕ್ಕವರನ್ನು ಪೊರೆಯುವೆನೆಂಬ ಶುದ್ಧ ಬುದ್ಧಿಯುಳ್ಳ, ಹೇಮಕಿಂಕಿಣಿ =ಬಂಗಾರದ ಗೆಜ್ಜೆಗಳ ಕಿಣ ಕಿಣಶಬ್ದ ಮಾಡುವ, ಮಾಲಿಕಾರಸನಾಂಚಿತಂ= ಮಾಲೆಗಳಿಂದ ಕೂಡಿರುವ ಉಡುಗೆಜ್ಜೆಯಿಂದ ಶೋಭಿಸುವ ರತ್ನಕಾಂಚನವಸ್ತ್ರಚಿತ್ರಕಟಿಂ= ರತ್ನಕೆತ್ತಿದ ಬಂಗಾರದಂತೆ ಬಣ್ಣಬಣ್ಣದ ಬಟ್ಟೆಗಳಿಂದ ಶೋಭಿತ ಸೊಂಟವುಳ್ಳ, ಘನಪ್ರಭಯಾ= ದಟ್ಟಾದ ಕಾಂತಿಯಿಂದ, ಘನಂ= ಮೋಡದಂತೆ ಕಪ್ಪಾದ ಕಾಂತಿಯುಳ್ಳ, ಕಮ್ರನಾಗಕರೋಪಮೋರು= ಮನಮೋಹಕವಾದ ಆನೆಯ ಸೊಂಡಿಲಿನಂತಿರುವ ತೊಡೆಗಳುಳ್ಳ, ವರ= ಶ್ರೇಷ್ಟವಾದ, ರೌಪ್ಯಪೀಠಕೃತಾಲಯಂ= ಉಡುಪಿಯೇ ಆಲಯವಾಗಿರುವ, ತಂ= ಆ ಪ್ರಸಿದ್ಧನಾದ, ಹರಿಂ= ಶ್ರೀ ಕೃಷ್ಣನನ್ನು ಅಹಂ= ನಾನು, ಆಲಯಂ= ಮರಣ ಪರ್ಯಂತ, ನೌಮಿ =ನಮಿಸುತ್ತೇನೆ.

ತಾತ್ಪರ್ಯ : ಶ್ರೀಹರಿಯ ಗುಣಗಳನ್ನು ಕೊಂಡಾಡುವುದೇ ಶ್ರೇಷ್ಟವಾದ ಧರ್ಮ. ಮನಮೋಹಕವಾದ ಅಂಗಾಂಗಗಳಿಂದ ಶೋಭಿಸುವ ಶ್ರೀಹರಿಯನ್ನು ನಮಸ್ಕರಿಸುತ್ತೇನೆ

ಶ್ಲೋಕ : ವೃತ್ತಜಾನು ಮನೋಜ್ಞ ಜಂಘಮ ಮೋಹದಂ ಪರಮೋಹದಂ
ರತ್ನ ಕಲ್ಪನಖತ್ವಿಷಾಹೃತಮುತ್ತಮಸ್ತುತಿಮುತ್ತಮಂ ।

**ಪ್ರತ್ಯಹಂ ರಚಿತಾರ್ಚನಂ ರಮಯಾ ಸ್ವಯಾಗತಯಾಸ್ವಯಂ**
**ಚಿತ್ತಚಿಂತಯ ರೌಪ್ಯ ಪೀಠ ಕೃತಾಲಯಂ ಹರಿಮಾಲಯಂ ॥೫॥**

ಅರ್ಥ : ಹೇ ಚಿತ್ತ= ಎಲೈ ಮನವೇ, ಅಮೋಹದಂ =ಮೋಹ ಶಾಸ್ತ್ರವನ್ನು ಖಂಡಿಸುವ, ಪರಮೋಹದಂ =ಅಭಕ್ತರನ್ನು ಮೋಹಗೊಳಿಸುವ, ಸ್ತುತಿಮತ್ತಮಂ =ತನ್ನ ಸ್ತುತಿಯಿಂದ ಸಂತೋಷಪಡುವ, ವೃತ್ತಜಾನು ಮನೋಜ್ಞ ಜಂಘಂ= ದುಂಡಾದ ಮೊಣಕಾಲುಗಳಿಂದ, ಮನೋಹರವಾದ ಜಂಘಗಳಿಂದ ಕೂಡಿರುವ, ರತ್ನಕಲ್ಪನಖತ್ವಿಷಾಹೃತಮತ್ತಮಃ =ರತ್ನ ಸದೃಶವಾದ ನಖಗಳ ಕಾಂತಿಯಿಂದ ಅಂಧಕಾರವನ್ನು ನಿವಾರಿಸುವ, ಸ್ವಯಂ =ತಾನೇ, ಆಗತಯಾ= ಬಂದಿರುವ, ಸ್ವಯಾ= ತನ್ನವಳಾದ, ರಮಯಾ =ರಮಾದೇವಿಯಿಂದ, ಪ್ರತ್ಯಹಂ =ಪ್ರತಿದಿನವೂ, ರಚಿತಾರ್ಚನಂ= ಪೂಜೆಗೊಳ್ಳುವ, ರೌಪ್ಯ ಪೀಠ ಕೃತಾಲಯಂ= ಉಡುಪಿಯನ್ನೇ ಮನೆಮಾಡಿಕೊಂಡಿರುವ, ಹರಿಂ =ಶ್ರೀ ಕೃಷ್ಣನನ್ನು, ಆಲಯಂ =ಆ ಮರಣಪರ್ಯಂತ, ಚಿಂತಯ= ನೆನಸುತ್ತಾ ಇರು,

ತಾತ್ಪರ್ಯ : ಶ್ರೀ ಕೃಷ್ಣನ ನಖ, ಮೊಣಕಾಲು ಮತ್ತು ಜಂಘೆಗಳು ಮನಮೋಹಕ ಹಾಗೂ ಅಂಧಕಾರವನ್ನು ನಿವಾರಿಸುವ ಕಾಂತಿಯುಳ್ಳದ್ದು. ಪ್ರತಿನಿತ್ಯವೂ ರಮಾದೇವಿಯರಿಂದ ಪೂಜೆಗೊಳ್ಳುವ ಶ್ರೀ ಕೃಷ್ಣನನ್ನು ಆಮರಣ ಪರ್ಯಂತ ನೆನಸುತ್ತಾ ಇರು ಎಂದು ಮನಸ್ಸಿಗೆ ಸಂಬೋದಿಸಿದ್ದಾರೆ.

ಶ್ಲೋಕ : **ಚಾರು ಪಾದ ಸರೋಜ ಯುಗ್ಮರು ಚಾಮರೋಚ್ಚಯ ಚಾಮರೋ**
**ದಾರ ಮೂರ್ಧಜ ಭಾರಮಂಡಲ ರಂಜಕಂ ಕಲಿಭಂಜಕಂ ।**
**ವೀರತೋಚಿತ ಭೂಷಣಂ ವರನೂಪುರಂ ಸ್ವತನೂಪುರಂ**
**ಧಾರಯಾತ್ಮನಿ ರೌಪ್ಯ ಪೀಠಕೃತಾಲಯಂ ಹರಿಮಾಲಯಂ ॥೬॥**

ಅರ್ಥ : ಕಲಿಭಂಜಕಂ= ಕಲಿಬಾಧೆಯನ್ನು ಭರ್ಜನೆಮಾಡುವ, ವೀರತೋಚಿತ ಭೂಷಣಂ= ಶೌರ್ಯವೆಂಬ ಆಭರಣದಿಂದ ಶೋಭಿಸುವ, ಚಾರುಪಾದ ಸರೋಜ ಯುಗ್ಮರುಚಾ =ಮನೋಹರವಾದ ಎರಡು ಪಾದ ಕಮಲಗಳ ಕಾಂತಿಯಿಂದ, ಅಮರೋಚ್ಚಯಚಾಮರೋದಾರ ಮೂರ್ಧಜ ಭಾರಮಂಡಲರಂಜಕಂ= ದೇವತೆಗಳ ಸಮೂಹದ ಚಾಮರದಂತಿರುವ ತಲೆಗೂದಲುಗಳ ಮಧ್ಯಭಾಗವನ್ನು ರಂಜಿಸುತ್ತಿರುವ, ವರನೂಪುರಂ= ಶ್ರೇಷ್ಠವಾದ ಕಾಲುಗೆಜ್ಜೆಗಳುಳ್ಳ, ಸ್ವತನೂಪುರಂ =ತನಗೆ ತಾನೇ ಪ್ರವೃತ್ತನಾದ್ದರಿಂದ ತನ್ನ ದೇಹದಲ್ಲಿಯೂ ವಾಸವಾಗಿರುವ, ರೌಪ್ಯಪೀಠಕೃತಾಲಯಂ= ಉಡುಪಿಯನ್ನೇ ಮನೆಮಾಡಿಕೊಂಡಿರುವ, ಹರಿಂ= ಶ್ರೀ ಕೃಷ್ಣನನ್ನು

ಅಲಯಂ = ಆ ಮರಣ ಪರ್ಯಂತ, ಆತ್ಮನಿ = ಮನಸ್ಸಿನಲ್ಲಿ, ಧಾರಯ = ಧಾರಣೆ ಮಾಡು.

ತಾತ್ಪರ್ಯ : ಕಲಿಭಾದೆಯನ್ನು ತೊಲಗಿಸುವ ಮನೋಹರವಾದ ಕಮಲಗಳ ಕಾಂತಿಯಿಂದ ಪಾದದ್ವಯಗಳು, ಚಾಮರದಂತಿರುವ ತಲೆಗೂದಲುಗಳ ಸುಂದರಾಕೃತಿಯ ಶ್ರೀಕೃಷ್ಣನು ಉಡುಪಿಯನ್ನೇ ಮನೆ ಮಾಡಿಕೊಂಡಿದ್ದಾನೆ. ಅಂತಹ ಕೃಷ್ಣನನ್ನು ಸದಾ ಮನಸ್ಸಿನಲ್ಲಿ ಚಿಂತಿಸು.

ಶ್ಲೋಕ : ಶುಷ್ಕವಾದಿಮನೋತಿದೂರತರಾಗಮೋತ್ಸವದಾಗಮಂ
ಸತ್ಕವೀಂದ್ರ ವಚೋವಿಲಾಸಮಹೋದಯಂ ಮಹಿತೋದಯಂ ।
ಲಕ್ಷ್ಯಯಾಮಿ ಯತೀಶ್ವರೈಃ ಕೃತಪೂಜನಂ ಗುಣಭಾಜನಂ
ಧಿಕ್ಕೃತೋಪಮ ರೌಪ್ಯಪೀಠಕೃತಾಲಯಂ ಹರಿಮಾಲಯಂ ॥೭॥

ಅರ್ಥ ; ಶುಷ್ಕವಾದಿಮನೋತಿದೂರತರಃ = ನಿರುಪಯುಕ್ತವಾದ ವಾದಗಳನ್ನು ಮಾಡುವವರ ಮನಸ್ಸಿಗೆ ಅತಿದೂರವಾಗಿರುವ, ಆಗಮೋತ್ಸವದಾಗಮಂ=ಶಾಸ್ತ್ರಗಳ ಮುಖ್ಯಾರ್ಥವನ್ನೇ ತಿಳಿಸಿಕೊಡುವ ಆಗಮಸ್ವರೂಪನಾಗಿರುವ, ಸತ್ಕವೀಂದ್ರ ವಚೋ ವಿಲಾಸ ಮಹೋದಯಂ=ಜ್ಞಾನಿಗಳು ಮತ್ತು ಕವಿಶ್ರೇಷ್ಠರಾದ ವಾಲ್ಮೀಕಿ, ಶುಕ ಮುಂತಾದವರ ಭಗವತ್ಕೀರ್ತನೆಯಿಂದ ಹುಟ್ಟಿದ ಮಹಾ ಪ್ರಕಾಶದಿಂದ ಕೂಡಿದ ಗುಣಭಾಜನಂ=ಜ್ಞಾನಾನಂದಾದಿ ಗುಣಗಳಿಗೆ ಮುಖ್ಯ ಆಶ್ರಯನಾದ, ಯತೀಶ್ವರೈಃ= ಯತಿಗಳಲ್ಲಿ ಶ್ರೇಷ್ಠರಾದ ಶ್ರೀಮಧ್ವಾನಂದ ತೀರ್ಥರಿಂದ, ಕೃತಪೂಜನಂ=ಪೂಜೆ ಮಾಡಿಸಿಕೊಳ್ಳುವ, ಮಹಿತೋದಯಂ=ಅತ್ಯುತ್ತಮವಾದ ಸ್ವರೂಪ ಸುಖವನ್ನು ಕೊಡುವ, ಧಿಕ್ಕೃತೋಪಮ = ಉಪಮೆಯನ್ನು ಕೊಡುವ ಎಲ್ಲವನ್ನೂ ತುಚ್ಛೀಕರಿಸುವಂತಹ, ರೌಪ್ಯಪೀಠಕೃತಾಲಯಂ = ಉಡುಪಿಯನ್ನೇ ಮನೆಮಾಡಿಕೊಂಡಿರುವ, ಹರಿಂ = ಶ್ರೀ ಕೃಷ್ಣನನ್ನು, ಆಲಯಂ= ಬಿಡದಲೇ, ಲಕ್ಷಯಾಮಿ= ನೋಡುತ್ತೇನೆ.

ತಾತ್ಪರ್ಯ : ಸರ್ವಜ್ಞರಾದ ಶ್ರೀ ಮಧ್ವಾಚಾರ್ಯರಿಂದ ಪೂಜೆಗೊಳ್ಳುವ ಶ್ರೀ ಕೃಷ್ಣನು ಕೇವಲ ಶುಷ್ಕ ತರ್ಕಕ್ಕೆ ಸಿಲುಕದೆ, ಸದಾಗಮದಿಂದಲೇ ವೇದ್ಯನು. ಉಪಮಾರಹಿತನು. ಜ್ಞಾನಿಗಳಿಂದ ಭಗವದ್ಗುಣಗಳನ್ನು • ವರ್ಣನೆ ಮಾಡಿಸುವವನು. ಅಂತಹ ಶ್ರೀಕೃಷ್ಣನು ಉಡುಪಿಯನ್ನೇ ಮನೆಮಾಡಿಕೊಂಡಿರುವನು. ಅವನನ್ನು ನಾನು ನೋಡುತ್ತೇನೆ.

ಶ್ಲೋಕ : ನಾರದಪ್ರಿಯ ಮಾವಿಶಾಂಬುರುಹೇಕ್ಷಣಂ ನಿಜಲಕ್ಷಣಂ
ದ್ವಾರಕೋಪಮ ಚಾರುದೀಪರುಚಾಂತರೇ ಗತಚಿಂತರೇ ।

**ಧೀರಮಾನಸ ಪೂರ್ಣಚಂದ್ರಸಮಾನಮಚ್ಯುತಮಾನಮ**
**ದ್ವಾರಕೋಪಮ ರೌಪ್ಯಪೀಠ ಕೃತಾಲಯಂ ಹರಿಮಾಲಯಂ ॥೮॥**

ಅರ್ಥ : ನಾರದಪ್ರಿಯಂ= ನಾರದರಿಗೆ ಪ್ರಿಯನಾದ, ಅಂಬುಜ ಈಕ್ಷಣಂ= ಕಮಲ ದಂತಿರುವ ಕಣ್ಣುಳ್ಳ, ನಿಜಲಕ್ಷಣಂ= ಶ್ರೇಷ್ಠವಾದ ಸ್ವರೂಪಭೂತವಾದ ಲಕ್ಷಣಗಳುಳ್ಳ ದ್ವಾರಕೋಪಮ ಚಾರುದೀಪರುಚಾಂತರೇ= ದ್ವಾರಕೆಯ ದೀಪಕಾಂತಿಗೆ ಸಮನಾದ ಮನೋಹರವಾದ ದೀಪಕಾಂತಿಯ ಮಧ್ಯದಲ್ಲಿ ನಿಂತಿರುವ, ಹರಿಂ= ಶ್ರೀಕೃಷ್ಣನನ್ನು, ಗತಚಿಂತ =ವಿಷಯ ಲಂಪಟದಿಂದ ಕೂಡಿದ, ರೇ =ಎಲೈ ಮನವೇ, ಆವಿಶ =ಸೇರು ಸರ್ವ ಕಾಲದಲ್ಲೂ ಭಗವದ್ವಿಷಯಕ ಬುದ್ಧಿಯುಳ್ಳವನಾಗು, ಧೀರಮಾನಸಚಂದ್ರ ಸಮಾನಂ= ಜ್ಞಾನಿಗಳ ಮನಸ್ಸನ್ನು ಸಂತೋಷಗೊಳಿಸುವಲ್ಲಿ ಪೂರ್ಣಚಂದ್ರನಂತಿರುವ, ಅಚ್ಯುತಂ = ಭಕ್ತರನ್ನು ರಕ್ಷಿಸುವ ವಿಷಯದಲ್ಲಿ ಚ್ಯುತನಾಗದ, ದ್ವಾರಕೋಪಮ ರೌಪ್ಯಪೀಠಕೃತಾಲಯಂ= ದ್ವಾರಕೆಗೆ ಸಮನಾಗಿರುವ, ಉಡುಪಿಯನ್ನೇ ಮನೆಮಾಡಿ ಕೊಂಡಿರುವ, ಹರಿಂ =ಶ್ರೀಕೃಷ್ಣನನ್ನು ಆಲಯಂ= ಆಮರಣಪರ್ಯಂತ, ಆನಮ = ನಮಸ್ಕರಿಸು.

ತಾತ್ಪರ್ಯ : ಪರಮಾತ್ಮನಲ್ಲಿಯೇ ಸರ್ವದಾ ಮನಸ್ಸನ್ನಿಟ್ಟು, ಅವನ ಪ್ರಸಾದ ದ್ವಾರಾ ಭವಪಾಶನಾಶವಾಗಿ ಮುಕ್ತಿಯನ್ನು ಹೊಂದಬೇಕಾದರೆ, ವಿಷಯ ಲಂಪಟ ದಿಂದ ಕೂಡಿದ ಮನಸ್ಸನ್ನು ನಿಗ್ರಹಿಸಿ, ಅವನಲ್ಲಿಯೇ ಬುದ್ಧಿಯುಳ್ಳವನಾಗಿ ಆಮರಣ ಪರ್ಯಂತ ನಮಸ್ಕರಿಸಬೇಕೆಂದು ರಾಜರು ಹೇಳುತ್ತಾರೆ.

ಶ್ಲೋಕ ; **ರೌಪ್ಯಪೀಠಕೃತಾಲಯಸ್ಯಹರೇಃ ಪ್ರಿಯಂ ದುರಿತಾಪ್ರಿಯಂ**
**ತತ್ಪದಾರ್ಚಕ ವಾದಿರಾಜಯತೀರಿತಂ ಗುಣಪೂರಿತಂ**
**ಗೋಪ್ಯಮಷ್ಟಕಮೇತದುಚ್ಚಮುದೇ ಮಮಾಸ್ತ್ವಿಹ ನಿರ್ಮಮ**
**ಪ್ರಾಪ್ಯಶುದ್ಧಫಲಾಯ ತತ್ರಸುಕೋಮಲಂ ಹೃತಧೀಮಲಂ ॥೯॥**

ಅರ್ಥ : ರೌಪ್ಯಪೀಠಕೃತಾಲಯಸ್ಯ =ಉಡುಪಿಯೇ ಮನೆಯಾಗಿರುವವನ, ಹರೇಃ = ಶ್ರೀಕೃಷ್ಣನಿಗೆ, ಪ್ರಿಯಂ = ಪ್ರೀತಿಕರವಾದ, ದುರಿತ = ಸಕಲ ಪಾಪಗಳಿಗೂ, ಅಪ್ರಿಯಂ= ಅಪ್ರಿಯವಾದ, ಗುಣಪೂರಿತಂ= ಗುಣಗಳಿಂದ ವಿಶಿಷ್ಟನಾದ, ಸುಕೋ ಮಲಂ = ಒಳ್ಳೆ ಕೋಮಲವಾದ, ಧೀಃ =ಬುದ್ಧಿಯ, ಮಲಂ =ದೋಷವನ್ನು, ಹೃತ = ಪರಿಹರಿಸುವ, ಏತದ್ = ಈ, ಗೋಪ್ಯಮಷ್ಟಕಂ = ಶ್ರೀಕೃಷ್ಣಾಷ್ಟಕವು, ಇಹ= ಇಲ್ಲಿ, ನಿರ್ಮಮಂ= ಅಹಂ ಮಮತಾರಹಿತವಾಗಿ, ಶುದ್ಧ ಫಲಾಯ =ಶ್ರೇಷ್ಟ ವಾದ ಮೋಕ್ಷಫಲವನ್ನೇ, ಪ್ರಾಪ್ಯ =ಹೊಂದುವುದಕ್ಕಾಗಿ, ಮಮ = ನನ್ನ, ಉಚ್ಚ ಮುದೆ =ಶ್ರೇಷ್ಟವಾದ ಸಂತೋಷಕ್ಕಾಗಿ, ಅಸ್ತು =ಆಗಲಿ.

ತಾತ್ಪರ್ಯ : ಶ್ರೀವಾದಿರಾಜರು ಶ್ರೀಕೃಷ್ಣಾಷ್ಟಕಕ್ಕೆ ಫಲಸ್ತುತಿಯನ್ನು ಹೇಳುತ್ತಾರೆ. ಶ್ರೀಕೃಷ್ಣನಿಗೆ ಅತ್ಯಂತ ಪ್ರೀತಿಕರವಾದ, ಕೋಪಮಲವಾದ ಸಕಲ ದುರಿತಗಳನ್ನೂ ನಾಶ ಮಾಡುವ, ಬುದ್ಧಿಯ ಕಶ್ಮಲಗಳನ್ನು ಪರಿಹರಿಸುವ ಈ ಅಷ್ಟಕವು ಶ್ರೇಷ್ಟವಾದ ಮೋಕ್ಷಫಲವನ್ನು ಕೊಡುವುದು.

ಇತಿ ಶ್ರೀಮದ್ವಾದಿರಾಜ ಪೂಜ್ಯಚರಣವಿರಚಿತಂ ಶ್ರೀಕೃಷ್ಣಾಷ್ಟಕಂ ಸಂಪೂರ್ಣಂ

ಶ್ರೀಕೃಷ್ಣಾರ್ಪಣಮಸ್ತು

# ದಶಾವತಾರ ಸ್ತವನಂ

ಶ್ರೀಮದ್ರಾಘವೇಂದ್ರತೀರ್ಥ ಗುರ್ವಂತರ್ಯಾಮಿ ಭಾರತೀಪತಿ ಮುಖ್ಯ ಪ್ರಾಣಾಂತರ್ಗತ ಸೀತಾಪತೇ ಶ್ರೀರಾಮಚಂದ್ರಾಯ ನಮಃ ॥ಹರಿಃ ಓಂ॥

## ಮತ್ಸ್ಯಾವತಾರ ವರ್ಣನಂ

ವೇದಸಿದ್ಧಮಣುತೋಽಪ್ಯಣುಭಾವಂ ಮೋದದಾಯಿ ಮಹತೋಽಪಿ ಮಹತ್ವಂ
ಬಿಭ್ರತಂ ಪ್ರಥಯಿತುಂ ಮನವೇ ತ್ವಾಂ ಮೀನತಾಂ ಶರಣಯಾಮಿ ಭವಂತಂ ॥೧॥

ಅರ್ಥ : ಹೇ ಮೋದದಾಯಿ= ಸುಖಪ್ರದನಾದ ಶ್ರೀಹರಿಯೇ, ಅಣುತಃ ಅಪಿ = ಅಣು ಪದಾರ್ಥದಲ್ಲೂ ಮಹತ್ವವನ್ನು ಹೊಂದುವುದು, ವೇದಸಿದ್ಧಮ್ =ವೇದದಿಂದ ನಿರ್ಣೀತವಾಗಿರುವುದು. ಮನವೇ =ವೈವಸ್ವತ ಮನುವಿಗೆ, ಪ್ರಥಯಿತುಂ = ತಿಳಿಸುವುದಕ್ಕೋಸ್ಕರ, ಮೀನತಾಂ = ಮತ್ಸ್ಯಾವತಾರವನ್ನು ಬಿಭ್ರತಂ =ಧರಿಸಲ್ಪಟ್ಟಿತು. ಭವಂತಂ ತ್ವಾಂ= ಅಂತಹ ಮತ್ಸ್ಯಾವತಾರಿಯಾದ ಶ್ರೀಹರಿಯಾದ ನಿನ್ನನ್ನು ಶರಣಯಾಮಿ =ಶರಣು ಹೊಂದುತ್ತೇನೆ.

ತಾತ್ಪರ್ಯ : ಶ್ರೀ ರಾಘವೇಂದ್ರತೀರ್ಥ ಶ್ರೀಪಾದಂಗಳವರು ಮತ್ಸ್ಯಾವತಾರವನ್ನು ವರ್ಣನಮಾಡಿ ಸ್ತೋತ್ರ ಮಾಡುತ್ತಾರೆ. ಸುಖಪ್ರದನಾದ ಶ್ರೀಹರಿಯೇ ಅಣುವಿನಲ್ಲೂ ಅಣುಭಾವವನ್ನು ಮಹತ್ತಿನಲ್ಲಿ ಮಹತ್ವವನ್ನು ಹೊಂದುವುದು ವೇದದಲ್ಲಿ ಪ್ರತಿಪಾದಿತವಾಗಿದೆ. "ಅಣೋರಣೀಯಾನ್ ಮಹತೋ ಮಹೀಯಾನ್" ಎಂದು ಶ್ರುತಿಯಲ್ಲಿ ಪ್ರಸಿದ್ಧವು. ಚಾಕ್ಷುಷ ಮನ್ವಂತರದ ಕೊನೆಭಾಗದಲ್ಲಿ ಸತ್ಯವ್ರತನೆಂಬ ಪಾಂಡ್ಯ ದೇಶದ ರಾಜರ್ಷಿಯು, ಕೃತಮಾಲಾ ನದಿಯಲ್ಲಿ ಜಲತರ್ಪಣ ಮಾಡಬೇಕೆಂದು ಅಂಜಲಿಯಲ್ಲಿ ನೀರನ್ನು ಹಿಡಿದಾಗ ಚಿಕ್ಕ ಮೀನೊಂದು ಬಂದು ನನ್ನನ್ನು ರಕ್ಷಿಸು ಎಂದು ಕೇಳಿತು. ಆಗ ತನ್ನ ಕಮಂಡಲುವಿನಲ್ಲಿ ರಕ್ಷಣೆ ಮಾಡಿ ಆಶ್ರಮಕ್ಕೆ ಒಯ್ದನು. ಅದು ಮೊದಲು ಬಾವಿಯಲ್ಲಿ, ನಂತರ ಸರೋವರದಲ್ಲಿ ಹೀಗೆ ಅಣುವಾಗಿದ್ದುದು ಮಹತ್ತಾಗಿ ಬೆಳೆಯಿತು. ಇನ್ನು ಏಳನೇದಿನದಲ್ಲಿ ಪ್ರಳಯವಾಗುವುದು. ಆಗ ನೀನು ಲೋಕವಿಲಕ್ಷಣವಾದ ನಾವೆಯಲ್ಲಿ ಸಪ್ತರ್ಷಿಗಳ ಸಮೇತ ಕುಳಿತು, ಆ ನಾವೆಯನ್ನು ನನ್ನ ವಿಲಕ್ಷಣವಾದ ಮತ್ಸ್ಯರೂಪದ ಕೋಡಿಗೆ ಬಂಧನಮಾಡಿ ವಿಹರಿಸು ;— ನಿನಗೆ ಅನುಗ್ರಹ ಮಾಡುತ್ತೇನೆಂದು ಹೇಳಿದಾಗ, ಅದೇರೀತಿ ಶ್ರೀಹರಿಯು ಹತ್ತುಲಕ್ಷ ಯೋಜನಾತ್ಮಕವಾದ ಬಂಗಾರದ ಶರೀರದಿಂದ ಪ್ರಕಾಶಗೊಂಡು ಮತ್ಸ್ಯರೂಪನಾಗಿ

ಆ ಪಾಂಡ್ಯರಾಜನಾದ ಸತ್ಯವ್ರತನಿಗೆ ಮತ್ಸ್ಯ ಪುರಾಣವನ್ನು ಉಪದೇಶಿಸಿ ಈ ಮನ್ವಂತರಕ್ಕೆ ಅಧಿಪತಿಯನ್ನಾಗಿ ಮಾಡಿದನು. ಅವನೇ ವೈವಸ್ವತ ಮನುವು.

ಈ ಭಾಗವತ ಅಷ್ಟಮಸ್ಕಂದದ ಮತ್ಸ್ಯಾವತಾರದ ಕಥೆಯನ್ನು "ಮನವೇ ಪ್ರಥಯಿಂತಂ ಮೀನತಾಂ ಬಿಭ್ರತುಂ" ಎಂದು ಸಂಗ್ರಹಿಸಿ, ನನ್ನನ್ನು ಇಂತಹ ಪ್ರಳಯೋದಕದಂತೆ ಇರುವ ಸಂಸಾರ ಸಮುದ್ರದ ಅಲೆಗಳಿಂದ ರಕ್ಷಿಸಿ, ಸತ್ಯವ್ರತನಿಗೆ ಜ್ಞಾನೋಪದೇಶ ಮಾಡಿ ಸಲಹಿದಂತೆ ರಕ್ಷಿಸು ಎಂದು ಪ್ರಾರ್ಥಿಸುತ್ತಾರೆ.

ಶ್ಲೋಕ : **ವೇದವಿಪ್ಲುತಿಕೃತಂ ವಿಧಿಜಾಡ್ಯಂ ಹಂತಹಂತುಮುದಧಾಜ್ಜಲಜನ್ಮ ।**
**ಮೀನಭಾವನಭರೇಣ ತತೋಮೇ ವಿಸ್ತೃಣೀಹಿ ವಿಮಲಂ ಪ್ರತಿಬೋಧಂ ॥೨॥**

ಅರ್ಥ : ವೇದವಿಪ್ಲುತಿಕೃತಂ = ವೇದಗಳನ್ನು ಹಯಗ್ರೀವಾಖ್ಯ ದೈತ್ಯನು ಅಪಹರಿಸಲ್ಪಟ್ಟಿದ್ದರಿಂದ (ಅಂದರೆ ವೇದಾರ್ಥವನ್ನು ಮರೆಮಾಚಿದ್ದರಿಂದ), ವಿಧಿಜಾಡ್ಯಂ = ಚತುರ್ಮುಖ ಬ್ರಹ್ಮನಿಗೆ ಸೃಷ್ಟಿವಿಷಯದ ಅಜ್ಞಾನವು ಬರಲಾಗಿ ಹಂತುಂ = ಪರಿಹಾರಕ್ಕೋಸ್ಕರ, ಮೀನಭಾವನಭರೇಣ = ಮೀನಿನ ಅವತಾರವಿಶೇಷದಿಂದ ಜಲಜನ್ಮ = ಜಲದಲ್ಲಿ ಅವತಾರವು, ಉದಧಾತ = ಮಾಡಲ್ಪಟ್ಟಿತು (ನಿನ್ನಿಂದ) ತತಃ = ಆದ್ದರಿಂದ, (ಸ, ತ್ವಂ = ಆ ಅವತಾರಭೂತನಾದ ನೀನು) ಮೇ = ನನಗೆ ವಿಮಲಂ = ಸ್ವಚ್ಛವಾದ, ಪ್ರತಿಬೋಧಂ = ಪ್ರಕೃಷ್ಟವಾದ ಜ್ಞಾನವನ್ನು, ವಿಸ್ತೃಣೀಹಿ = ವಿಸ್ತಾರಮಾಡು.

ತಾತ್ಪರ್ಯ : ಹಿಂದಿನ ಕಲ್ಪಾಂತದಲ್ಲಿ ಬ್ರಹ್ಮದೇವರು ಪ್ರಳಯಕಾಲದಲ್ಲಿ ನಿದ್ರಾಪರರಾದಾಗ ಭೂಲೋಕವೇ ಮೊದಲಾದ ಒಂಬತ್ತು ಲೋಕಗಳು ಪ್ರಳಯದಲ್ಲಿ ಮುಳುಗಿದುವು. ಹಯಗ್ರೀವನಾಮಕ ದೈತ್ಯಶ್ರೇಷ್ಠನು ಬ್ರಹ್ಮನ ಮುಖದಿಂದ ಹೊರಟ ದೇಹಧಾರಿಗಳಾದ ವೇದಾಭಿಮಾನಿಗಳನ್ನು ಕದ್ದು ಓಡಿದನು. ಇದರಿಂದ ಬ್ರಹ್ಮದೇವರು ಸರ್ವಜ್ಞರಾದರೂ ಸೃಷ್ಟಿವಿಷಯದಲ್ಲಿ ಅಜ್ಞಾನವು ಈಶನ ಇಚ್ಛೆಯಂತೆ ಬಂದಿತು. ಶ್ರೀಶನೇ ಮತ್ಸ್ಯರೂಪನಾಗಿ ಹಯಗ್ರೀವಾಸುರನನ್ನು ಕೊಂದು ವೇದಗಳನ್ನು ಬ್ರಹ್ಮದೇವರಿಗೆ ತಂದು ಕೊಟ್ಟನು. ಈ ಮತ್ಸ್ಯಾವತಾರದಿಂದ ಬ್ರಹ್ಮದೇವರಿಗೆ ವೇದದಾನ ಮತ್ತು ವೈವಸ್ವತ ಮನುವಿಗೆ ವಿದ್ಯಾದಾನ ಎಂಬ ಎರಡು ಪ್ರಯೋಜನಗಳು. ಇದೇ ವಿದ್ಯಾದಾನ ಮತ್ತು ಜ್ಞಾನದಾನಗಳನ್ನು ನನಗೂ ವಿಸ್ತಾರ ಮಾಡು ಎಂದು ರಾಯರು ಪ್ರಾರ್ಥಿಸುತ್ತಾರೆ. ಇಷ್ಟು ಮೇಲಿನ ಶ್ರೀಮದ್ಭಾಗವತದ ಕಥೆಯನ್ನು "ವಿಧಿಜಾಡ್ಯಂ" ಎಂಬ ಪದದಿಂದ ಸಂಗ್ರಹಿಸಿರುತ್ತಾರೆ.

## ಕೂರ್ಮಾವತಾರ ವರ್ಣನಂ

**ಆತ್ಮನ್ಯೈವ ಕಮಠೇಣ ವಿತನ್ವನ್ ಮಂದರೇಣ ಚ ಭವಾನರಣೀ ದ್ವೇ।**
**ಮಥ್ನತೋಃ ಕೃತಹಲಾಹಲವಹ್ನೀ ಹೋತುಮಿಂದ್ರರಿಪು ವೃಂದ ಹವೀಂಷಿ**
॥೩॥

ಅರ್ಥ : ಭವಾನ್ = ನೀನು, ಆತ್ಮನ್ಯೈವ = ಸ್ವರೂಪಭೂತದಿಂದಲೇ, ಕಮಠೇಣ = ಆಮೆಯ ರೂಪದಿಂದ, ಮಂದರೇಣ ಚ = ಮತ್ತು ಮಂದರ ಪರ್ವತದಿಂದ, ದ್ವೇ ಅರಣೀ = ಎರಡು ಅಗ್ನಿಸಾಧನಭೂತವಾದ ಅರಣಿ ಎಂಬ ಕಾಷ್ಟವನ್ನಾಗಿ, ವಿತನ್ವನ್ = ಮಾಡಲ್ಪಟ್ಟಿತು. ಮಥ್ನತೋಃ = ಮಥನಮಾಡಿದ್ದರಿಂದ, ಇಂದ್ರರಿಪು ವೃಂದ = ಇಂದ್ರನ ಶತ್ರುಗಳೆಂಬ ಅಸುರ ಸಮೂಹವನ್ನು, ಹವೀಂಷಿ = ಹೋಮ ಸಾಧನ ದ್ರವ್ಯವನ್ನಾಗಿ, ಹೋತುಂ = ಹೋಮಮಾಡುವುದಕ್ಕಾಗಿ, ಹಾಲಹಲ ವಹ್ನೀಂ = ಹಾಲಹಲ ಎಂಬ ವಿಷವನ್ನು ಅಗ್ನಿಯನ್ನಾಗಿ, ಅಕೃತ = ವಿಮರ್ಶಿಸಲ್ಪಟ್ಟಿತು.

ತಾತ್ಪರ್ಯ : ಮತ್ಸ್ಯಾವತಾರವಾದಮೇಲೆ, ದೇವಾಸುರರು ಅಮೃತಕ್ಕಾಗಿ ಸಂವರ್ಣಾತ್ಮಕವಾದ ಮಂದರ ಪರ್ವತವನ್ನು ಮಥಿಸಿದರು. ಆಗ ಶ್ರೀಹರಿಯು ಕೂರ್ಮ ರೂಪದಿಂದ ಅವತರಿಸಿದನು. ಈ ಅವತಾರವು ಚಾಕ್ಷುಷ ಮನ್ವಂತರದಲ್ಲಿ ಮತ್ತು ವೈವಸ್ವತ ಮನ್ವಂತರದಲ್ಲಿ ನರಸಿಂಹಾವತಾರವಾದಮೇಲೆ ಪುನಃ ಕೂರ್ಮಾವತಾರವಾಗಿದೆ ಎಂದು ಬ್ರಹ್ಮಾಂಡ ಪುರಾಣವಚನವು. "ಅನಂತೋಧೋಮಂದರಸ್ತು ಯಂದಾ ವೈವಸ್ವತಾಂತರೇ। ಅಮೃತಾರ್ಥಂ ಸುಪರ್ಣೋಥೋ ಚಾಕ್ಷುಷನ್ಯಾಂತರೇ ಮನೋಃ ।

ಶ್ರೀಹರಿಯು ಅಮೃತ ಮಥನ ಕಾಲದಲ್ಲಿ ಒಂದು ರೂಪದಿಂದ ಮಂದರ ಪರ್ವತದ ಮೇಲೆಯೂ, ಕೂರ್ಮರೂಪದಿಂದ ಪರ್ವತದ ಕೆಳಗೂ, ದೇವಾಸುರರಲ್ಲಿಯೂ ವಾಸುಕಿಯಲ್ಲಿಯೂ ಚೂರ್ಣೀಭಾವಹೊಂದಬಾರದೆಂದು ಪರ್ವತದ ಒಳಗೂ ಪ್ರವೇಶ ಮಾಡಿ ಶ್ರೀಹರಿ ಒಬ್ಬನೆ ಸಮರ್ಥನೆಂದೂ ಸ್ವತಂತ್ರನೆಂದು ಪ್ರಕಟಮಾಡಿರುತ್ತಾನೆ. ಆಗ ಜಗತ್ತನ್ನೆಲ್ಲ ನಾಶಮಾಡುವ ಹಾಲಹಲ ವಿಷವು ಹುಟ್ಟಿತು. ಇಲ್ಲಿ ರಾಯರು ಆಮೆಯ ಮೇಲ್ಭಾಗವನ್ನು ಮತ್ತು ಮಂದರ ಪರ್ವತವನ್ನು ಎರಡು ಅರಣಿ ಕಾಷ್ಟಗಳಾಗಿ ವರ್ಣಿಸಿ, ಆ ಅರಣೀಮಥನದಿಂದ ಹುಟ್ಟಿದ ಕಾಲಕೂಟ ಎಂಬ ಅಗ್ನಿಯು ಇಂದ್ರರಿಪುಗಳಾದ ದೈತ್ಯರನ್ನು ಹೋಮ ಮಾಡುವುದಕ್ಕಾಗಿ ಎಂದು 'ಕಮಠೇಣ' 'ಇಂದ್ರರಿಪುವೃಂದ ಹವೀಂಷಿ' ಎನ್ನುವ ಪದದಿಂದ ಕೂರ್ಮಾವತಾರವನ್ನು ಸ್ತೋತ್ರ ಮಾಡಿದ್ದಾರೆ.

## ವರಾಹಾವತಾರ ವರ್ಣನಂ

ಶ್ಲೋಕ : **ಆದಿಸೂಕರಧರೋದ್ಧರಣಂ ತೇ ಸಿಂಧುಬಂಧು ಜಠರಾತ್ ಶ್ರುತಿಗೀತವ್।**
**ಮಾದೃಶಾಂ ಭವಪಯೋಧಿಗತಾನಾಂ ರಕ್ಷಣೇ ಪರಿಚಯಂ ತದವೈಮಃ**
**॥೪॥**

**ಅರ್ಥ :** ಹೇ ಆದಿಸೂಕರ= ಎಲೈ ಆದಿ ವರಾಹಮೂರ್ತಿಯೇ, ತೇ= ನಿನ್ನ ಸಿಂಧು ಬಂಧು ಜಠರಾತ್ =ಸಮುದ್ರದ ಮಧ್ಯಭಾಗದಿಂದ, **ಧರೋದ್ಧರಣಂ= ಭೂಮಿಯ ಉದ್ಧಾರವು (ರಕ್ಷಣವು), ಶ್ರುತಿಗೀತಂ= ವೇದದಿಂದ ಸ್ತುತಿಸಲ್ಪಟ್ಟಿದೆ, ಯತ್= ಯಾವ ಭವಪಯೋಧಿಗತಾನಾಂ= ಸಂಸಾರ ಸಮುದ್ರದಲ್ಲಿ ಮುಳುಗಿದ ಮಾದೃಶಾಂ = ನನ್ನಂತಹವನನ್ನು, ರಕ್ಷಣೇ= ಪಾಲನೆ ಮಾಡುವುದರಲ್ಲಿ, ಪರಿಚಯಂ= ಪರಿಶೀಲನೆ ಯನ್ನು ಮಾಡುತ್ತೀಯೆಂದು ಅವೈಮಃ= ತಿಳಿದಿದ್ದೇನೆ.**

ತಾತ್ಪರ್ಯ : ಯಾವುದಾದರೂ ಒಂದು ಕೆಲಸವನ್ನು ಮಾಡುವ ಪುರುಷನು ಮೊದ ಲಲ್ಲಿ ಕೆಲಸದ ಪರಿಚಯವಾಗುವುದಕ್ಕೋಸ್ಕರ ಅಭ್ಯಾಸಮಾಡಿ ಆ ಕೆಲಸವನ್ನು ಮಾಡು ತ್ತಾನೋ, ಹಾಗೆಯೇ ಸಂಸಾರ ಸಮುದ್ರದಲ್ಲಿ ಮುಳುಗಿರುವ ನಮ್ಮಂತಹವರನ್ನು ಉದ್ಧಾರ ಮಾಡುವುದಕ್ಕೋಸ್ಕರ ಮೊದಲು ಭೂಮಿಯ ಉದ್ಧಾರ ಮಾಡಿದೆ ಎಂದು ತಿಳಿಯುತ್ತೇನೆ, ಎಂಬ ಭಾವವನ್ನು "ಆದಿ ಸೂಕರಧರೋದ್ಧರಣಂ" ಎಂಬ ಪದದಿಂದ ಸೂಚಿಸುತ್ತಾರೆ.

ವಿ. ಅ. ಬ್ರಹ್ಮದೇವರು ಸ್ವಾಯಂಭುವ ಮನು ಮತ್ತು ಶತರೂಪಾದೇವಿಯರಿಗೆ ಮಿಥುನ ಸೃಷ್ಟಿಯಿಂದ ಪ್ರಜಾಭಿವೃದ್ಧಿಕಾರ್ಯದಲ್ಲಿ ನಿರತರಾಗಬೇಕೆಂದು ಉಪದೇಶಿ ಸಿದರು. ಲಕ್ಷಯೋಜನೆ ಘನೀಭೂತವಾದ ಭೂಮಿಯು, ಘನೋದಕದಲ್ಲಿ ಸ್ವಯಂ ತಾನೇ ಮುಳುಗುತ್ತಿರಲಾಗಿ, ಬ್ರಹ್ಮ ದೇವರು ಶ್ರೀಹರಿಯನ್ನು ಸರ್ಗಕಾರ್ಯವು ಅವಿಚ್ಛಿನ್ನವಾಗಿ ನಡೆಯಲು ಭೂಮಿಯನ್ನು ಉದ್ಧರಿಸಬೇಕೆಂದು ಪ್ರಾರ್ಥಿಸಿದರು. ಭಕ್ತಿಯಿಂದ ಧ್ಯಾನಿಸುತ್ತಿರಲು ಬ್ರಹ್ಮನ ಮೂಗಿನ ಬಲ ಹೊಳ್ಳೆಯಿಂದ ಅಂಗುಷ್ಠಪರಿ ಮಿತಗಾತ್ರವಾದ ವರಾಹ ಕಿಶೋರವು ಹೊರಬಂದು ಆಕಾಶದಲ್ಲಿ ನಿಂದು, ನಿಮಿಷಾರ್ಧ ದಲ್ಲಿ ಮಹದಾಕೃತಿಯನ್ನು ಹೊಂದಿತು. ತನ್ನಷ್ಟಕ್ಕೆ ಮುಳುಗಿದ ಭೂಮಿಯನ್ನು ಉದ್ಧರಣ ಮಾಡಲು ಹೊರಟ ಶ್ರೀ ಆದಿವರಾಹನಿಗೆ, ಬ್ರಹ್ಮಪುತ್ರನಾದ ಆದಿಹಿರಣ್ಯಾಕ್ಷ ನೆಂಬ ದೈತ್ಯನು ತಡೆದನು. ಅವನನ್ನು ಸಂಹರಿಸಿ ಭೂಮಿಯನ್ನು ಉದ್ಧರಿಸಿದನು.

ದಿತಿದೇವಿಯು ಉದರದಲ್ಲಿ ಜನಿಸಿದ ಹಿರಣ್ಯಾಕ್ಷನು ಭೂಮಿಯನ್ನು (ಭೂಮ್ಯಾಭಿಮಾನಿ ದೇವತಾ) ರಸಾತಲ ಲೋಕದಲ್ಲಿ ಅಡಗಿಸಿಟ್ಟು ಲೋಕಕಂಠಕನಾದನು. ಬ್ರಹ್ಮನಿಂದ ಪ್ರಾರ್ಥಿಸಿಕೊಳ್ಳಲ್ಪಟ್ಟ ಶ್ವೇತವರಾಹದೇವರು ಈ ಕಶ್ಯಪ ಪುತ್ರನಾದ ಹಿರಣ್ಯಾಕ್ಷನನ್ನು ಸಂಹರಿಸಿ ಧರೆಯನ್ನುದ್ಧರಿಸಿದನು. ಈ ವಿಷಯವು ಬ್ರಹ್ಮಾಂಡ ಪುರಾಣದಲ್ಲಿ ಹೀಗೆ ಹೇಳಿದೆ, "ಬ್ರಹ್ಮಜಸ್ತು ಹಿರಣ್ಯಾಕ್ಷಃ ಪ್ರಥಮಂ ದಂಷ್ಟ್ರಯಾಹತಃ । ಸ ಏವಾ ಪಾರ್ಷದಾವಿಷ್ಟಃ ಪೂರ್ವಂ ಲಯೋದದೌ ಮಗ್ನಾಂ ದ್ವಿತೀಯಂ ತೇನ ಮಜ್ಜಿತಾಂ । ಧ್ರುವಮುದ್ಧರತ್ಯೈವಾಸೌ ಹರಿಣಾ ಕ್ರೌಢಮೂರ್ತಿನಾ—

ಶ್ಲೋಕ : **ಪೂರ್ಣಚಂದ್ರಗತಲಕ್ಷಣರೇಖಾ ಲಕ್ಷಿತಾಯದಿ ತದೈಕ ಕಲಾಯಾಂ ।**
**ಸಂಶ್ರಿತೇಂದು ಮಣಿದಂಷ್ಟ್ರಧರಂ ಸ್ಯಾತ್ಸೋಪಮಾ ಭವತಿ ಸೂಕರರೂಪ**
॥೫॥

ಅರ್ಥ : ಹೇ ಸೂಕರರೂಪ ಭಗವನ್=ಎಲೈ ವರಾಹ ರೂಪಿ ಭಗವಂತನೇ, ಯದಿ= ಯಾವಾಗ, ಪೂರ್ಣ ಚಂದ್ರಗತ ಲಕ್ಷಣ ರೇಖಾ= ಹುಣ್ಣಿಮೆಯ ಚಂದ್ರನ ಮಧ್ಯವರ್ತಿನಿಯಾದ ಗುರ್ತಿನ ಗೆರೆಯು, ಏಕಕಲಾಯಾಂ= ಚಂದ್ರನ ಹದಿನಾರು ಕಲೆಯ ಮಧ್ಯದ ಒಂದು ಕಲೆಯು, ಲಕ್ಷತಾ ಸ್ಯಾತ್ =ಕಾಣುತ್ತದೆಯೋ, ತದಾ =ಆಗ, ಇಂದು ಮಣಿ ದಂಷ್ಟ್ರಧರಂ= ಚಂದ್ರಕಾಂತ ಮಣಿಯಂತೆ ಬೆಳ್ಳಗಿರುವ ಕೋರೆಹಲ್ಲುಗಳನ್ನು ಧರಿಸಿರುವ ನೀನು, ಸಾ ಉಪಮಾ= ಉಪಮಾನವನಾಗಿ, ಸಂಶ್ರಿತಾ ಭವತಿ= ಆಶ್ರಯಿಸಿರುತ್ತದೆ.

ತಾತ್ಪರ್ಯ : ಪೂರ್ಣಚಂದ್ರನಲ್ಲಿ ಕಪ್ಪಾಗಿರುವ ರೇಖೆಯು ಹದಿನಾರು ಕಲಾಮಧ್ಯೆ ಒಂದು ಕಲೆಯು ದೃಶ್ಯವಾಗುತ್ತದೆಯೋ ಹಾಗೆ ವರಾಹ ದೇವರ ಕೃಷ್ಣ ಬಣ್ಣವುಳ್ಳ ದೇಹವು ಶುಭ್ರವರ್ಣದ ಕೋರೆಹಲ್ಲಿನ ಚಂದ್ರನ ಮಧ್ಯೆ ಕಲಂಕರೇಖೆ ಇದ್ದಹಾಗ ಶೋಭಿಸುತ್ತಾ ಇದೆ.

ವಿ. ಅ. : ಈ ಚಂದ್ರವರ್ಣನೆಯು ಆನಂದ ಜ್ಞಾನಾತ್ಮಕ ಶರೀರವುಳ್ಳ ವರಾಹ ದೇವರು ಭೂದೇವಿಯ ಬಳಿಗೆ ಹೋಗಿ ಶೃಂಗಾರ ರಸಪೂರ್ಣವಾದ ಲೀಲೆಯಿಂದ ಭೂದೇವಿಯನ್ನು ಮೇಲಕ್ಕೆತ್ತಿ ಆಲಿಂಗಿಸಿ ವಿರಾಜಿಸುತ್ತಾರೆ ಎಂಬ ಭಾವದಿಂದ ವರ್ಣಿತವಾಗಿದೆ

## ನರಸಿಂಹಾವತಾರ ವರ್ಣನಂ

ಶ್ಲೋಕ : ತಾವಕಂ ನರಹರೇತಿವಿರುದ್ಧಂ ವೇಷಧಾರಣಮಿದಂ ತನುತೇ ನಃ ।
ಆತ್ಯಸಂಘಟಿತ ಕರ್ಮ ಚ ಕೃತ್ವಾ ಪಾಲಯೋ ಪ್ರಣತ ಮಿತ್ಯುಪದೇಶಂ॥
॥೬

ಅರ್ಥ : ಹೇ ನರಹರೇ= ಎಲೈ ನೃಸಿಂಹನೇ, ಅತಿವಿರುದ್ಧಂ= ಅತಿವಿರುದ್ಧವಾದ ರೂಪಗಳನ್ನು ಹೊಂದಿದ, ಅಂದರೆ ಪಾಲನೆ ಮಾಡುವುದರಲ್ಲಿ ಶಾಂತ ರೂಪವು, ಸಂಹಾರ ಮಾಡುವುವರಲ್ಲಿ ಭಯಂಕರ ರೂಪವು ಹೀಗೆ ರಕ್ಷಣೆ ಮತ್ತು ಸಂಹಾರಾದಿಗಳು ವಿರುದ್ಧವು, ತಾವಕಂ= ನಿನ್ನ ಸಂಬಂಧಿಯಾದ, ಇದಂ ವೇಷಧಾರಣಂ = ಈ ರೂಪ ಧಾರಣೆಯು, ಅತ್ಯಸಂಘಟಿತ ಕರ್ಮ= ಅತಿ ದುರ್ಘಟವಾದ ಕ್ರಿಯೆಯು, ಕೃತ್ವಾಚ= ಮಾಡಿದರೂ ಕೂಡ, ಪ್ರಣತಂ= ಭಕ್ತರನ್ನು, ಪಾಲಯೇ= ಪಾಲನೆ ಮಾಡುತ್ತಿ, ನಃ= ನಮಗೆ, ಉಪದೇಶಂ= ಉಪದೇಶವನ್ನು, ತನುತೇ= ಮಾಡುತ್ತೀ.

ತಾತ್ಪರ್ಯ : ಭಯಂಕರ ರೂಪವನ್ನು ಧಾರಣೆ ಮಾಡಿ, ಹಿರಣ್ಯಕಶಿಪುವನ್ನು ಸಂಹಾರ ಮಾಡಿ ಪ್ರಹ್ಲಾದನನ್ನು ರಕ್ಷಿಸಿದ್ದೀಯೋ, ಹಾಗೆ ಅನ್ಯರಿಂದ ಅಪರಿಹಾರ್ಯ ವಾದ ದುರಿತ ಸಮೂಹವನ್ನು ನಾಶಮಾಡಿ, ಭಕ್ತರನ್ನು ಸಂರಕ್ಷಣೆ ಮಾಡಂತ್ತೀ. ವಿರುದ್ಧವಾದ ಧರ್ಮಗಳಿಗೆ ಆಶ್ರಯನಾಗಿದ್ದೀಯೋ. ಅಣುತ್ವ-ಮಹತ್ವ, ಸಂಹಾರ ಕತ್ವ-ಪಾಲಕತ್ವ, ನರತ್ವ-ಸಿಂಹತ್ವ ಇತ್ಯಾದಿ ವಿರುದ್ಧ ಧರ್ಮಗಳು ಒಂದೆಡೆಯಲ್ಲಿ ಇರುವುದಿಲ್ಲವೆಂಬ ಪರಮತ ಪ್ರಮೇಯವನ್ನೇ 'ನರಹರೇऽತಿ ವಿರುದ್ಧಂ' ಎಂಬ ಪದ ದಿಂದ ಸೂಚಿಸುತ್ತಾರೆ.

ಶ್ಲೋಕ : **ದಾರಿಕೋದರ ಹಿರಣ್ಯಕಶತ್ರೋರಾಂತ್ರಮಾಲ್ಯ ಕಲಿತಂ ತವರೂಪಂ ।**
**ನಾರಸಿಂಹ ಕಲಯೇऽನನುಭೂತಂ ಶಾರದಂ ಜಲಧರಂ ಸಹಶಂಪಂ ॥೭॥**

ಅರ್ಥ : ನಾರಸಿಂಹ= ಎಲೈ ನಾರಸಿಂಹನೇ, ದಾರಿಕೋದರಹಿರಣ್ಯಕಶತ್ರೋಃ= ಸೀಳಲ್ಪಟ್ಟ ಹಿರಣ್ಯಕಶಿಪು ಎಂಬ ಶತ್ರುವಿನ, ಆಂತ್ರ್ಯಮಾಲ್ಯಕಲಿತಂ= ಕರುಳಿನ ಮಾಲೆಯಿಂದ ಶಿರದಲ್ಲಿ ಅಲಂಕೃತವಾದ, ತವರೂಪಂ= ನಿನ್ನ ರೂಪವು, ಶಾರದಂ= ಶರತ್ಕಾಲದಲ್ಲಿ ಸ್ಥಿತವಾದ, ಅನನುಭೂತಂ= ಯಾವಾಗ್ಲೂ ಕಾಣದ, ಸಹಶಂಪಂ= ಮಿಂಚಿನಿಂದ ಕೂಡಿದ ಬೆಳ್ಳಗಿರುವ, ಜಲಧರಂ= ಮೇಘದಂತೆ, ಕಲಯೇ= ತಿಳಿಯು ತ್ತೇನೆ.

ತಾತ್ಪರ್ಯ : ಹೇ ನಾರಸಿಂಹನೇ, ನಿನ್ನ ಶರೀರವು ಶ್ವೇತವರ್ಣವುಳ್ಳದ್ದು ಕರುಳಿನ ಮಾಲೆಯಿಂದ ಅಲಂಕೃತವಾಗಿದೆ. ಶರತ್‌ಕಾಲದ ಮೇಘದಂತೆ, ಶರತ್ಕಾಲದ ಮೇಘ ದಲ್ಲಿ ಮಿಂಚಿಲ್ಲದಿದ್ದರೂ ನಿನ್ನ ಶರೀರವು ಮಿಂಚಿನಂತೆ ಶೋಭಿಸುತ್ತದೆ.

"ಶಂಪಾ ಶತಹ್ರದಾ ಹ್ರಾದಿನ್ಯೈರಾವತ್ಯಃ ಕ್ಷಣಪ್ರಭಾ" ಇತ್ಯಮರಃ

ವಿ. ಅರ್ಥ : ಶತ್ರುವಾದ ಹಿರಣ್ಯಕಶಿಪುವಿನ ಹೊಟ್ಟೆಯನ್ನೇ ಸೀಳಿ, ಕರುಳಿನಮಾಲೆ ಯನ್ನು ಕತ್ತಿನಲ್ಲಿ ಧರಿಸಿ, ಭಕ್ತನಾದ ಪ್ರಹ್ಲಾದನಿಗೋಸ್ಕರ ಅಭಯವನ್ನು ಕೊಟ್ಟು

ದೇವತಾ ವೃಂದವನ್ನು ಸಂತೋಷಪಡಿಸಿದ ಮಿಂಚಿನಂತಹ ಶರೀರವುಳ್ಳ ನರಸಿಂಹ ದೇವರನ್ನೇ ಸ್ತುತಿಸುತ್ತಾರೆ.

1) ನಾರಸಿಂಹ ಎಂಬ ಪದಕ್ಕೆ ಅರ್ಥಾಂತರವನ್ನು ಹೇಳುತ್ತಾರೆ.
ನರಸಂಬಂಧೀನಾರಃ = ಸಾಧಕಾನಾಂ, ಸಿಂಹಃ= ಶ್ರೇಷ್ಟಃ ಸಾಧಕರಲ್ಲಿ ಶ್ರೇಷ್ಟನಾದ ವನು ವಾಯು (ಸಾಧಕೇಷು ನರೋತ್ತಮೋ ವಾಯುಃ) ನಾರಸಿಂಹಾನಾಂ ರೂಪಂ= ಜೀವೋತ್ತಮರಾದ ವಾಯುದೇವರಿಗೆ ಪ್ರತಿಮಾರೂಪನಾಗಿರುವವನು ನಾರಸಿಂಹ (ಆಭಾಸೋಕಸ್ಯ ಪವನಃ ಪವನಸ್ಯ ರುದ್ರಃ ಶೇಷಾತ್ಮಕೋ ಗರುಡ ಏವಚ ಶಕ್ರ ಕಾವರೌ)

2) ನರಃ =ಉಪಸಾಧಕೋ ನರಶ್ಚೇಷು ಶ್ರೇಷ್ಟಃ ಶೇಷಃ ಉಪಲಕ್ಷಣತಯಾ ಗರುಡ ರುದ್ರೌಗ್ರಾಹ್ಯ ಗರುಡಶೇಷರುದ್ರಾಣಾಂ ಸಿಂಹಪ್ರಾಯಃ ನಾರಸಿಂಹಃ= ವಾಯುಃ ನರಸಿಂಹಾನಾಂ ರೂಪಃ = ಬಿಂಬರೂಪಃ ನಾರಸಿಂಹ ರೂಪಃ =ಉಪಸಾಧಕರಾದ ಗರುಡಶೇಷ ರುದ್ರರಿಗೆ ಬಿಂಬರೂಪನಾದವರು ವಾಯುದೇವರು. ಅವರಿಗೆ ಬಿಂಬರೂಪಿ ಶ್ರೀ ನಾರಸಿಂಹ.

## ವಾಮನಾವತಾರ ವರ್ಣನಂ

**ಜ್ಞಾನತಾಂ ನಿಜಮನಃ ಪರಮಾಣೌ ವ್ಯಾತುಮೇವ ಬಲಿನಿಗ್ರಹದಂಭಾತ್**
**ವಾಮನಂ ಯದಭವತ್ತವರೂಪಂ ತತ್ಸುಖೇನ ಭಗವನ್ ಹೃದಿಕುರ್ಮಃ**
**॥೮॥**

ಅರ್ಥ : ಜ್ಞಾನತಾಂ= ಜ್ಞಾನಿಗಳ, ನಿಜಮನಃ ಪರಮಾಣೌ = ಸ್ವಕೀಯ ಮನಃ, ರೂಪ ಪರಮಾಣು ದ್ರವ್ಯದಲ್ಲಿ, ವ್ಯಾತುಮೇವ =ಅಂತರ್ಯಾಮಿಯಾಗಿ ಕರ್ತೃವಾಗಿ ರುವ, ಭಗವನ್= ಪರಮಾತ್ಮನೇ, ಬಲಿನಿಗ್ರಹದಂಭಾತ್= ಬಲಿಚಕ್ರವರ್ತಿಯನು ನಿಗ್ರಹ ಮಾಡುವ ನೆಪದಿಂದ, ತವ ಯದ್ವಾಮನಂ ರೂಪಮಭವತ್ =ನಿನ್ನ ಯಾವ್ವ ವಾಮನ ರೂಪ ಅವತಾರವಾಯಿತೋ, ತದ್ವಾಮನರೂಪಂ= ಆ ವಾಮನ ರೂಪ ವನ್ನು, ಸುಖೇನ= ಅನಾಯಾಸದಿಂದ (ಅಣುತ್ವಾತ್= ಅಣುರೂಪದಿಂದ), ಹೃದಿ = ಹೃದಯದಲ್ಲಿ (ಮನಸ್ಸಿನಲ್ಲಿ), ಕುರ್ಮಃ =ಧರಿಸುತ್ತೇನೆ.

ತಾತ್ಪರ್ಯ : ಹೇ ಭಗವಂತನಾದ ವಾಮನರೂಪಿ ಶ್ರೀಹರಿಯೇ, ಜ್ಞಾನಿಗಳ ನಿಜ ಮನದಲ್ಲಿ ಅಣುರೂಪವಾದ ಮನಸ್ಸೆಂಬ ದ್ರವ್ಯದಲ್ಲಿ ಅಂತರ್ಯಾಮಿಯಾಗಿ ಬಲಿ ನಿಗ್ರಹ ಮಾಡುವ ನೆಪದಿಂದ ನೀನು ವಾಮನರೂಪನಾಗಿ ಸಣ್ಣವನಾಗಿ ನಂತರ ದೊಡ್ಡ ತ್ರಿವಿಕ್ರಮ ರೂಪವನ್ನು ಧಾರಣೆಮಾಡಿದೆಯೋ, ಅಣುಪದಾರ್ಥದಲ್ಲಿ ದೊಡ್ಡ

ದಾದ ಸ್ಥೂಲಪದಾರ್ಥಗಳು ಪ್ರವೇಶಿಸಿದರೆ ದುಃಖವಾಗುವುದು. ಚಿಕ್ಕದಾದ ಅಣು ಪದಾರ್ಥದಲ್ಲಿ, ಚಿಕ್ಕಪದಾರ್ಥವೇ ಪ್ರವೇಶಿಸಿದರೆ ಸುಖವಾಗುತ್ತದೆ ಎಂಬ ಭಾವದಲ್ಲಿ ಶ್ರೀ ರಾಯರು, ನಿನ್ನ ಚಿಕ್ಕ ವಾಮನ ರೂಪವನ್ನು ಚಿಕ್ಕದಾದ ಮನಸ್ಸಿನಲ್ಲಿ ಧರಿಸು ತ್ತೇನೆ ಎಂದು ಸ್ತುತಿಸುತ್ತಾರೆ. ದೈತ್ಯ ಶ್ರೇಷ್ಠನಾದ ಬಲಿಚಕ್ರವರ್ತಿಯು, ಬ್ರಹ್ಮನ ವರ ಪ್ರಧಾನದಿಂದ ಅಜೇಯತ್ವವನ್ನು ಹೊಂದಿ, ಪಿತಾಮಹನಾದ ಪ್ರಹ್ಲಾದರಾಜರಿಂದ ಪ್ರಾರ್ಥಿಸಲ್ಪಟ್ಟ ನರಸಿಂಹದೇವರ ವಚನ ನಿಮಿತ್ತವೂ, ಬಲಿಷ್ಠನಾಗಿ ವಾಮನ ದೇವರ ಭೂಮಿ ಯಾಚನೆಯಿಂದ ನಿಗ್ರಹಿಸಲ್ಪಟ್ಟನು.

ಒಬ್ಬನನ್ನು ಯಾಚನೆ ಮಾಡಬೇಕಾದರೆ, ಮಹಾದೊಡ್ಡ ದೇಹವಾದರೂ ಗಿಡ್ಡವಾಗಿ ಮಾಡಿಕೊಂಡು ಸಂಕೋಚದಿಂದ ಬೇಡಬೇಕು. ಅಂದರೆ ಪರಯಾಚನೆ ಮಾಡುವುದು ಅಷ್ಟು ನಿಕೃಷ್ಟವೆಂದು ತೋರಿಸಲು, ಶ್ರೀರಾಯರು "ವಾಮನು ಯದಭವತ್ತವ ರೂಪಂ" ಎಂದು ವರ್ಣನೆ ಮಾಡಿದ್ದಾರೆ.

## ಪರಶುರಾಮಾವತಾರ ವರ್ಣನಂ

ಶ್ಲೋಕ : ಚಂದ್ರಮಾ ಇವ ಭುವೋವಿರಚನ್ನಕ್ಷತ್ರಯೋಗಮಪಿ ಯತ್ವಮಲಾಸೀಃ
ತೇನ ಶಾತ್ರವ ಯಶೋಂಬುಜ ರಾಜಮುದ್ರಣಂ ತವಕೃತಿಂ ಬಹುಮನ್ಯೇ ॥೯॥

ಅರ್ಥ : ತ್ವಂ= ನೀನು, ಯತ್ =ಯಾವ ಕಾರಣದಿಂದ, ಅಮಲಾಸೀಃ= ಶುಭ್ರ ವಾದ, ಚಂದ್ರಮಾ ಇವ =ಚಂದ್ರನಂತೆ, ಭುವೋ= ಭೂಮಿಯಲ್ಲಿ, ನ ಕ್ಷತ್ರಯೋಗಂ= ಕ್ಷತ್ರಿಯರ ಅಭಾವ ಸಂಬಂಧವನ್ನು, ವಿರಚನ್ =ಉಂಟುಮಾಡಿದೆಯೋ (ಸಕಲ ಕ್ಷತ್ರಿ ಯರನ್ನುಸಂಹಾರ ಮಾಡಿರುತ್ತೀ), ತೇನ = ಆ ಕ್ಷತ್ರಿಯರ ಅಭಾವ ಸಂಬಂಧದಿಂದ ಶಾತ್ರವ ಯಶೋಂಬುಜರಾಜಿ ಮುದ್ರಣಂ= ಶಾಸ್ತ್ರವಾಣಿ ಶತ್ರುಗಳಿಗೆ ಸಂಬಂಧಿಸಿದ ಯಶಸ್ಸೆಂಬ ಕಮಲ ಸಮೂಹಗಳಿಗೆ, ಮುಕುಳೀಭಾವವನ್ನು ಹೊಂದಿಸಿ (ಅಂದರೆ ಯಶಸ್ಸನ್ನು ನಾಶಪಡಿಸಿ) ತವಕೃತಿಂ =ನಿನ್ನ ದುಷ್ಟರ ನಾಶಮಾಡತಕ್ಕ ಚರಿತ್ರೆಯನ್ನು, ಬಹುಮನ್ಯೇ =ಪೂಜಿಸುತ್ತೇನೆ.

ತಾತ್ಪರ್ಯ : ಲೋಕದಲ್ಲಿ ಕಾರ್ತವೀರ್ಯಾರ್ಜುನನೇ ಮೊದಲಾದ ದುಷ್ಟಕ್ಷತ್ರಿ ಯರು ತಪಸ್ವಿಯಾದ ಜಮದಗ್ನಿ ಋಷಿಗಳನ್ನು ಸಂಹರಿಸಿದಾಗ ಪರಶುರಾಮದೇವರು ಬ್ರಹ್ಮಹತ್ಯಾ ಪಾಪರತರಾದ ಕ್ಷತ್ರಿಯರ ತಲೆಗಳನ್ನು ಕುರುಕ್ಷೇತ್ರದಲ್ಲಿ ರಕ್ತಪ್ರವಾಹ ವನ್ನು ಹರಿಸಿದರು. ಇಪ್ಪತ್ತೊಂದು ಸಲ ಭೂಮಂಡಲವನ್ನೆಲ್ಲಾ ಸಂಚರಿಸಿ ನಿಃಕ್ಷತ್ರಿಯ ರನ್ನಾಗಿ ಮಾಡಿದರು. ಅಂತಹ ಕ್ಷತ್ರಿಯರ ಯಶಸ್ಸಿಗೆ ಚಂದ್ರಮನಂತೆ (ಅಂದರೆ

ಚಂದ್ರೋದಯವಾದಾಗ ಕಮಲಗಳು ಮುಕುಳೀಭಾವವನ್ನು ಹೊಂದುತ್ತದೆ) ಇರುವ ಪರಶುರಾಮದೇವರನ್ನು ಪೂಜಿಸುತ್ತೇನೆ.

## ರಾಮಾವತಾರ ವರ್ಣನಂ

ಶ್ಲೋಕ : **ತಾರಣೇ ದುರಿತ ನೀರನಿಧೇರ್ನಃ ಸೇತುಭಾವಮುಚಿರೇಣಯಿಯಾಸೋಃ ।**
**ಭಾಸತೇ ತವ ವಿಭೋ ಕರುಣಾಯಾಃ ಪೂರ್ವರಂಗ ಇವ ದಕ್ಷಿಣಸೇತುಃ**
**॥೧೦॥**

ಅರ್ಥ : ಹೇ ವಿಭೋ = ಪರಮ ಸಮರ್ಥನಾದ ರಾಮಚಂದ್ರನೇ, ನಃ = ನಮ್ಮ ದುರಿತನೀರನಿಧೇಃ = ಪಾಪವೆಂಬ ಸಮುದ್ರದಿಂದ, ತಾರಣೇ ದಾಟಿಸುವುದರಲ್ಲಿ ಸೇತುಭಾವಂ = ಸೇತುವೆಯಂತೆ, ಅಚಿರೇಣ = ಶೀಘ್ರವಾಗಿ, ಯಿಯಾಸೋಃ = ಹೋಗ ಲಿಚ್ಛಿಸುವವನಾಗಿ, ತವ ಕರುಣಾಯಾಃ = ನಿನ್ನ ಕರುಣಾದಿಂದ, ಪೂರ್ವರಂಗಇವ = ಪೂರ್ವಪ್ರಸಂಗದಂತೆ, ದಕ್ಷಿಣಸೇತುಃ = ದಕ್ಷಿಣಸಮುದ್ರದ ಸೇತುವೆಯು ಭಾಸತೇ = ವಿರಾಜಿಸುತ್ತದೆ.

ತಾತ್ಪರ್ಯ : ಎಲೈ ಸಮರ್ಥನಾದ ಶ್ರೀರಾಮಚಂದ್ರನೇ, ಪಾಪವೆಂಬ ಸಮುದ್ರ ವನ್ನು ದಾಟಿಸುವುದರಲ್ಲಿ ನಿನ್ನ ಕರುಣಾ ಎಂಬ ಸೇತುವು ಭಕ್ತರ ಪಾಪವನ್ನು ನಾಶ ಮಾಡಿ ದಕ್ಷಿಣ ಸಮುದ್ರದ ಸೇತುವೆಯಂತೆ ರಕ್ಷಿಸುತ್ತದೆ.

ವಿ. ಅರ್ಥ : "ಸೇತುಂ ದೃಷ್ಟ್ವಾ ಸಮುದ್ರಸ್ಯ ಬ್ರಹ್ಮಹತ್ಯಾಂವ್ಯಪೋಹತಿ". ನೂರು ಯೋಜನ ವಿಸ್ತಾರವಾದ ರಾಮಸೇತುವು, ದುಷ್ಟರಾದ ರಾವಣ, ಕುಂಭಕರ್ಣ ಮೊದ ಲಾದ ರಾಕ್ಷಸರನ್ನು ಕೊಲ್ಲುವುದಕ್ಕಾಗಿಯೂ, ಸುಲಭವಾಗಿ ಸಜ್ಜನರಾದ ಕಪಿಗಳ ಸೈನ್ಯವು ಸಮುದ್ರವನ್ನು ದಾಟುವುದಕ್ಕೋಸ್ಕರ ನಿರ್ಮಿಸಲ್ಪಟ್ಟಿತು. ಈಗ ಶ್ರೀರಾ ಯರು, ಈ ಪಾಪವೆಂಬ ಸಮುದ್ರವನ್ನು ಭಕ್ತರು ದಾಟಲು, ನಿನ್ನ ಕರುಣೆ ಎಂಬ ಸೇತುವೆಯು ದಕ್ಷಿಣ ಸಮುದ್ರದ ಸೇತುವೆಯಂತೆ ವಿರಾಜಿಸುತ್ತಿದೆ ಎಂದು ರಾಮಚಂದ್ರ ದೇವರ ಸ್ತೋತ್ರವನ್ನು ಮಾಡುತ್ತಾರೆ.

## ಕೃಷ್ಣಾವತಾರ ವರ್ಣನಂ

ಶ್ಲೋಕ : **ಬಂಧನಾಯ ಕೃತಮಾತ್ಮಜನನ್ಯಾ ತಾದೃಶಂ ಚ ಗುಣಮುಗ್ರ್ಯಕರೋ**
**ರ್ಯತ್ ।**
**ತೇನ ನಿರ್ಗುಣಮತಾನಿ ನಿರಸ್ಯನ್ ದರ್ಶಯಸ್ಯಪಿ ನಿಜಾಂ ಗುಣವ**
**ತ್ತಾಂ ॥೧೧॥**

ಅರ್ಥ : ಆತ್ಮಜನನ್ಯಾಃ= ತನ್ನ ತಾಯಿಯಾದ ಯಶೋದಾದೇವಿಯಿಂದ, ಬಂಧ ನಾಯಂ = ಬಂಧನ ಕಾರ್ಯವು ಮಾಡಲ್ಪಟ್ಟಿತು. ತಾದೃಶಂಚ = ಹಾಗಾದರೂ, ಗುಣಂ =ಹಗ್ಗವನ್ನು, ಯಂತ್= ಯಾವ ಕಾರಣದಿಂದ, ತ್ವಂ =ನೀನು, ಅಂಗ್ಯ ಕರೋಃ= ಅಂಗೀಕೃತಮಾಡಿರುತ್ತಿ, ತೇನ =ಆ ಹಗ್ಗ ಸ್ವೀಕಾರದಿಂದ, (ಗುಣದಿಂದ) ನಿರ್ಗುಣವಾತಾನಿ =ಬ್ರಹ್ಮ ನಿರ್ಗುಣ, ನಿರ್ಧರ್ಮಕ ಹೀಗೆಂಬ ಮತಗಳನ್ನು ನಿರ ಸ್ಯಾನ್ = ನಿರಾಕರಣೆ ಮಾಡಿದವನಾಗಿ, ನಿಜಾಂ = ನಿನ್ನ ಸ್ವರೂಪಭೂತವನ್ನು, ಗುಣವತ್ತಾಂ = ಅನಂತಕಲ್ಯಾಣಗುಣವುಳ್ಳನೆಂದು, ದರ್ಶಯಂಸೀ = ಪ್ರಕಾಶಪಡಿಸು ತ್ತೀಯೆ.

ತಾತ್ಪರ್ಯ : ತಾಯಿಯಾದ ಯಶೋದಾದೇವಿಯು, ಯಾವಾಗಲೂ ಬಂಧರಹಿತ ನಾದ ಶ್ರೀಕೃಷ್ಣನನ್ನು ಹಗ್ಗದಿಂದ ಬಂಧಿಸಬೇಕೆಂದು ಸಮಸ್ತ ಹಗ್ಗಗಳ ಸಮೂಹವು ಮೇಲೆ ಮೇಲೆ ಗಂಟುಗಳಿಂದ ಕೂಡಿಸಿದರೂ ವಿಶ್ವಂಭರನಾದ ಶ್ರೀಕೃಷ್ಣನನ್ನು ಬಂಧಿ ಸಲು ಸಾಧ್ಯವಾಗಲಿಲ್ಲ. ಆದರೆ ತಾಯಿಯ ಅಧೀನ ಮಗನೆಂಬುವ ಧರ್ಮವನ್ನು ಜಗತ್ತಿಗೆ ತೋರಿಸಲು, ಕ್ರೀಡೆಯಿಂದ ಒಂದೇ ಕರುವನ್ನು ಕಟ್ಟಲು ಯೋಗ್ಯವಾದ ಹಗ್ಗದಿಂದ ಬಂಧಿಸಲ್ಪಟ್ಟು ದಾಮೋದರನಾದನು ಮತ್ತು ತಾನು ಗುಣಪೂರ್ಣನೆಂದು ಪರಮತದವರು ಹೇಳುವ ನಿರ್ಗುಣ, ನಿರ್ಧರ್ಮಕನಲ್ಲವೆಂದು ನಿದರ್ಶನಪೂರ್ವಕ ತೋರಿಸಿದ್ದಾನೆ. ಇದನ್ನೇ ಶ್ರೀರಾಯರು "ನಿರ್ಗುಣವಾತಾನಿ ನಿರಸ್ಯನ್ ದರ್ಶಯ ಸ್ಯಪಿ" ಎಂಬ ಪದದಿಂದ ತೋರಿಸಿದ್ದಾರೆ.

ಶ್ಲೋಕ : **ತ್ವಂ ಕುಚೇಲ ಮುನಿಮೀಶ**
**ಕುಚೇಲಾದ್ಯರ್ಪಣೇನ ಕೃತವಾನಕುಚೇಲಂ**
**ಸೋಭವತ್ವದತಿ ಚಾರು ಕುಚೇಲಾ**
**ಲಂಕೃತಸ್ತ್ವಾದಿದಮದ್ಭುತಮಾಸೀತ್** ॥೧೨॥

ಅರ್ಥ : ಹೇ ಈಶ =ಸ್ವಾಮಿಯಾದ ಕೃಷ್ಣನೇ, ತ್ವಂ =ನೀನು, ಕುಚೇಲಾದ್ಯರ್ಪ ಣೇನ =ಕುಚೇಲನಿಂದ ಅರ್ಪಿತವಾದ, ಅದ್ಯಂ= ಭಕ್ಷಿಸಲು ಯೋಗ್ಯವಾದ ಅವ ಲಕ್ಕಿಯ ಅರ್ಪಣೆಯಿಂದ, ಕುಚೇಲಮುನಿಂ = ಕುಚೇಲನೆಂಬ ಋಷಿಯನ್ನು ಅಕು ಚೇಲಂ= ಕುತ್ಸಿತವಾದ ವಸ್ತ್ರರಹಿತನನ್ನಾಗಿ (ದಿವ್ಯಾಭರಣ ಪೀತಾಂಬರಧಾರಿಯಾಗಿ) ಕೃತವಾನ್ = ಮಾಡಿರುತ್ತಿ, ಕದಪಿ = ಹಾಗಾದರೂ, ಚಾರುಕುಚೇಲಾಲಂಕೃತ = ಮನೋಹರವಾದ, ಕುಶ್ಚ= ಭೂಮಿಯು, ಚೇಲಶ್ಚ =ವಸ್ತ್ರಗಳನ್ನು ಅಲಂಕರಿಸಿದನು (ಕುಚೇಲನಿಗೆ), ಇತ್ಯದ್ಭುತಮಾಸೀತ್= ಈ ರೀತಿ ಆಶ್ಚರ್ಯದಿಂದ ಇದ್ದನು.

ತಾತ್ಪರ್ಯ : ಸಾಂದಿಪನಿ ಆಚಾರ್ಯರಲ್ಲಿ ಶ್ರೀಕೃಷ್ಣನ ಸಹಾಧ್ಯಾಯಿ ಮತ್ತು ಪರಮ ಭಕ್ತನಾದ ಕುಚೇಲನು (ಸುಧಾಮ) ಶ್ರೀಕೃಷ್ಣನಿಗೋಸ್ಕರ ಮೂರು ಹಿಡಿ